# ಸಿದ್ಧಗಂಗಾ

ಸಂಪುಟ–27. ಸಂಚಿಕೆ–3. ಮಾರ್ಚ್–1991.

ಬೇವು ಬೆಲ್ಲ ಸವಿಯು ಬೇಕು ಎಂಬ ಮಾತಿನಲ್ಲಿ ಅಮೂಲ್ಯವಾದ ಜೀವನ ಸಂದೇಶವಿದೆ. ಕಷ್ಟ ಸುಖಗಳನ್ನು ಅನುಭವಿಸಿದಾಗಲೇ ಮಾನವ ಶಕ್ತಿ ಸಂಪನ್ನವಾಗುವುದು. ಬೇವು ಕಹಿಯಾದರೂ ಆರೋಗ್ಯವರ್ಧಕ. ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ. ಕಷ್ಟ ಸಂಕಷ್ಟಗಳು ಬರುವುದು ವ್ಯಕ್ತಿಯನ್ನು ಪ್ರಕಾಶಗೊಳಿಸುವುದಕ್ಕಾಗಿಯೇ. ಕಷ್ಟ ಸುಖಗಳೆರಡನ್ನೂ ಸಮದೃಷ್ಟಿಯಿಂದ ನೋಡುವ ಪ್ರವೃತ್ತಿ ಬೆಳೆಸಿಕೊಂಡಾಗ ಜೀವನ ಒಂದು ಕಲೆ ಎಂದು ಅರಿವಾಗುತ್ತದೆ.

– ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ,
ಸಿದ್ಧಗಂಗಾ ಕ್ಷೇತ್ರ.



ಸಿದ್ಧಗಂಗಾ ತಾಂತ್ರಿಕ ಕಾಲೇಜಿನ ರಜತ ಮಹೋತ್ಸವ ಮಾರ್ಚಿ 1-2 ರಂದು ನಡೆಯಿತು. ರಾಜ್ಯ ಪಾಲರಾದ ಶ್ರೀ ಖುರ್ಷಿದ್ ಆಲಂ ಖಾನ್‌ರವರ ಪರವಾಗಿ ರಾಜ್ಯ ಶಿಕ್ಷಣ ಸಚಿವ ಶ್ರೀ ವೀರಪ್ಪ ಮೊಯಿ ಬೆಳ್ಳಿ ಹಬ್ಬದ ಉದ್ಘಾಟನೆ ನೆರವೇರಿಸಿದರು. ಚಿತ್ರದಲ್ಲಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು ಮತ್ತು ಕಿರಿಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್. ಆರ್. ಬೊಮ್ಮಾಯಿಯವರನ್ನು ಕಾಣಬಹುದು.



ಬೆಳ್ಳಿ ಹಬ್ಬದ ಮುಕ್ತಾಯ ಸಮಾರಂಭದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವೆ ಶ್ರೀಮತಿ ಕೆ. ಎಸ್. ನಾಗರತ್ನಮ್ಮನವರು ವಿದ್ಯಾರ್ಥಿನಿ ನಿಲಯದ ಸೌಲಭ್ಯ ಕೇಂದ್ರ ಕಟ್ಟಡದ ಶಂಕುಸ್ಥಾಪನೆ ನೆರವೇರಿಸಿ ಮಾತನಾಡುತ್ತಿರುವುದು. ಚಿತ್ರದಲ್ಲಿ ಸಮಾರೋಪ ಭಾಷಣ ಮಾಡಿದ ಮಾಜಿ ಮುಖ್ಯ ಮಂತ್ರಿ, ಸಂಸತ್ ಸದಸ್ಯರಾದ ಶ್ರೀ ಆರ್. ಗುಂಡೂರಾವ್ ಮತ್ತು ಉಭಯ ಶ್ರೀ ಶ್ರೀ ಗಳವರನ್ನು ಕಾಣಬಹುದು.

# ಸಿದ್ಧಗಂಗಾ

ಸಂಪುಟ–27.  ಸಂಚಿಕೆ–3.  ಮಾರ್ಚಿ–1991.


## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮನ್ನಿಪುದು ಗುರುರಾಯ ಎನ್ನಅಪರಾಧಗಳ
ಇನ್ನುಂಟೆ ನಿನ್ನಂತೆ ಕ್ಷಮೆ ಕಡಲು। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ದಾಸೋಹ ದೀವಿಗೆಯ ಕತ್ತಲೆಗೆ ನೀಮುಡಿಸಿ
ಈಶಜ್ಞಾನದ ಬೆಳಕ ಚೆಲ್ಲಿರುವೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

'ದಿವ್ಯ ಗಂಭೀರವೆ ಪರಮಾತ್ಮಲಿಂಗವೆ'
ಕಾವ್ಯ ಕಾರಣ ಕಿರಣ ತೇಜವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|



# ಶ್ರೀವಾಣಿ

ಗುರು ಪೀಠಗಳಿಗೂ ಸಮಾಜಕ್ಕೂ ಅನ್ಯೋನ್ಯ ಸಂಬಂಧವಿದೆ. ಬಾಂಧವ್ಯ ಬಳ್ಳಿವರಿದಿದೆ. ವೀರಶೈವ ಧರ್ಮದಲ್ಲಿ ಗುರು ಲಿಂಗ ಜಂಗಮ ಪರಮ ಮೌಲ್ಯಗಳು. ಕೇವಲ ಮೌಲ್ಯಗಳಲ್ಲ ಆತ್ಮ ಸಾಧನೆಯ ಉತ್ತುಂಗ ಶಿಖರಗಳು. ತತ್ವಪಾಲನೆಗಾಗಿ ಮಠಾಧಿಪತಿಗಳು ಅವುಗಳ ಆಡಳಿತ ಸೂತ್ರಗಳನ್ನು ವಹಿಸಿಕೊಂಡು ಬಂದರು. ವಿಶ್ವದ ಬೇರೆ ಕಡೆಗಳಲ್ಲಿ ಸಂಸ್ಕೃತಿಯ ಉದಯವಾದದ್ದಕ್ಕೂ ಭರತಖಂಡದಲ್ಲಿ ಅದು ಅರಳಿದ್ದಕ್ಕೂ ವ್ಯತ್ಯಾಸವಿದೆ. ನಗರಗಳಗಲ್ಲಿ ಅದರ ಉದಯ ಬೇರೆಕಡೆಗಳಲ್ಲಿಯಾದರೆ ಭರತಖಂಡದಲ್ಲಿ ಋಷ್ಯಾಶ್ರಮಗಳಲ್ಲಿ, ಪ್ರಶಾಂತ ಪರಿಸರದಲ್ಲಿ ಸಂಸ್ಕೃತಿ ಸಂಭವಿಸಿತು, ಅಲ್ಲಿಂದ ಎಲ್ಲೆಡೆಗೆ ಹರಿಯಿತು. ಆತ್ಮ ತತ್ವಕ್ಕೆ ಶರಣ ಸಿದ್ಧಾಂತ ಕೊಟ್ಟಿರುವ ಮಹತ್ವ ಸಹನ ಗಂಭೀರವಾಗಿರುವಂತೆಯೇ ಕ್ರಿಯಾಶೀಲವೂ ಆಗಿದೆ. ವೀರಶೈವ ಮಠಗಳು ಕೇವಲ ಲಿಂಗಪೂಜೆ, ಗುರುಭಕ್ತಿ, ಜಂಗಮ ಸೇವೆಗಳಲ್ಲಿಯೇ ಮುಕ್ತವಾಗದೆ ಲೋಕಸಂಗ್ರಹ ಮಣಿಹದಲ್ಲಿಯೂ ತೊಡಗಿದ್ದು ವಿಶಿಷ್ಟವಾದದ್ದು. ಲೋಕವನ್ನು ಗೌರವಿಸುತ್ತ, ಮಿಥ್ಯೆಯೆಂದು ಭಾವಿಸದೆ, ಸತ್ಯವೆಂದೇ ನಂಬಿ 'ಕರ್ತಾರನ ಕಮ್ಮಟ'ವನ್ನು ಅರ್ಥಪೂರ್ಣ ಮಾಡುತ್ತ ಬಂದಿದೆ. ವೀರಶೈವ ಮಠಗಳ ಸೇವೆ ಒಂದು ಸಮಾಜಕ್ಕೆ ಮಾತ್ರ ಸೀಮಿತವಾಗದೆ ಸರ್ವಸಮಾಜಗಳಿಗೂ ಲಭ್ಯವಾಗುತ್ತ ಬಂದಿದೆ. ಮಠಗಳು ವಿದ್ಯಾ ಕೇಂದ್ರಗಳಾಗಿ, ನ್ಯಾಯಾಲಯಗಳಾಗಿ, ಆರೋಗ್ಯ ಮಂದಿರಗಳಾಗಿ, ಆಡಳಿತ ಸಂಸ್ಥೆಗಳಾಗಿ, ಕಾರ್ಯನಿರ್ವಹಿಸುತ್ತ ಬಂದಿವೆ. ಧರ್ಮಸಂಸ್ಥೆಗಳ ಜೀವನದಿಂದ ಮಾನವೀಯ ಭಾವನೆಗಳ ವಿಕಾಸವಾಗಬೇಕು. ಅಮಾನವೀಯವಾದ ಚಟುವಟಿಕೆಗಳ ಕೇಂದ್ರಗಳಾಗಬಾರದು ಅವು. ಮಠಾಧಿಪತಿಗಳ ವ್ಯಕ್ತಿತ್ವವೂ, ಚಾರಿತ್ರ್ಯವೂ ಪರಿಶುದ್ಧವಾಗಿದ್ದಲ್ಲಿ ಮಠಗಳ ಬಗ್ಗೆ ಜನತೆಯಲ್ಲಿ ಪೂಜ್ಯಭಾವನೆ ಮೂಡಿ ಬರುತ್ತದೆ. ಆ ಪವಿತ್ರ ಪರಂಪರೆಯ ಪ್ರಕಾಶದಲ್ಲಿ ಜನಸಾಮಾನ್ಯರ ಜೀವನ ಹಸನಾಗುತ್ತದೆ. ಸಮಷ್ಟಿಯ ಅಭಿವೃದ್ಧಿಗಾಗಿ ಶ್ರಮಿಸುವ ಸಂಸ್ಥೆಗಳಿಗೆ ಎಲ್ಲ ಕಾಲದಲ್ಲೂ ಭಕ್ತಿ ವಿಶ್ವಾಸ ಗೌರವಗಳನ್ನು ಜನತೆ ಸಲ್ಲಿಸುತ್ತಲೇ ಬಂದಿದ್ದಾರೆ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ್ರಾ|| ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ತನುವೆಂಬುದೊಂದು ಹುತ್ತಕ್ಕೆ ಒಂಬತ್ತು ಬಾಗಿಲು
ತಾಮಸವೆಂಬ ಸರ್ಪಂಗೆ ತಲೆ ಹದಿನಾಲ್ಕು, ಒಡಲಾರು
ಬಾಲವ ಬ್ರಹ್ಮರಂಧ್ರ ಲೋಕಕ್ಕಿಟ್ಟು. ಶಿರವ ಹರಿದ್ವಾರದಲ್ಲಿರಿಸಿ,
ಕರಣೇಂದ್ರಿಯಂಗಳೆಂಬ ಕಾಳಕೂಟವಿಷವನೆ ಉಗುಳುತ್ತಿದೆ ನೋಡಾ
ಆವಿಷವು ಶಿವಶರಣರಲ್ಲದವರ ಸುಡುವುದ ಕಂಡೆನು ಕಾಣಾ
ಮಹಾಲಿಂಗ ಗುರುಶಿವಸಿದ್ದೇಶ್ವರ ಪ್ರಭುವೇ.

ಪಂಚ ಭೂತಗಳಿಂದೊಡಗೂಡಿರುವ ದೇಹವೆಂಬುದು ಒಂದು ಹುತ್ತ. ಅದರಲ್ಲಿ ಈಡಾ, ಪಿಂಗಳ ಮುಂತಾದ ಒಂಬತ್ತು ಬಾಗಿಲುಗಳು. ಅಂತಹ ದೇಹವೆಂಬ ಹುತ್ತದೊಳಗೆ ಅಜ್ಞಾನವೆಂಬ ಕಾಳೋರಗ. ಹದಿನಾಲ್ಕು ಇಂದ್ರಿಯಗಳೆ ಶಿರಸ್ಸು. ಅರಿಷಡ್ವರ್ಗಗಳೆ ಒಡಲು. ಆ ಕಾಳೋರಗ ಅಧಃ ಕುಂಡಲಿಯಲ್ಲಿ ನಾಭಿಸ್ಥಾನದಲ್ಲಿ ಏಳುಸುತ್ತುಗಳಾಗಿ ಮಲಗಿ, ಬಾಲವನ್ನು ಬ್ರಹ್ಮರಂಧ್ರಕ್ಕೆ ಎತ್ತಿ, ಶಿರವನ್ನು ಶಿವನಿ ಸ್ಥಾನದಲ್ಲಿಟ್ಟು, ಕರಣೇಂದ್ರಿಯಗಳ ಮೂಲಕ ವಿಷಯ ವಿಕಾರಗಳೆಂಬ ಕಾಳಕೂಟ ವಿಷವನ್ನು ಉಗುಳುತ್ತಿದೆ. ಆ ವಿಷವನ್ನು ಶಿವಶರಣನು ಜ್ಞಾನದಕಣ್ಣಿಂದ ನೋಡುತ್ತ-ಶಿವಶರಣರಲ್ಲದೆ ಉಳಿದವರನ್ನು ತಾಪತ್ರಯ ಅಗ್ನಿಯ ರೂಪದಲ್ಲಿ ಸುಡುತ್ತಿರುವುದನ್ನು ಉದಾಹರಿಸುತ್ತ ಅದನ್ನು ತಿರಸ್ಕರಿಸಿದನು.

# ಸಂಪಾದಕೀಯ

**ಎಸ್. ಐ. ಟಿ.-ಬೆಳ್ಳಿಹಬ್ಬ 1963-1991**

ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ. ಎಸ್. ಐ. ಟಿ. ಎಂದೇ ಪ್ರಸಿದ್ಧ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಹೆಮ್ಮೆಯ ಶಿಕ್ಷಣ ಸಂಸ್ಥೆ, ಶ್ರೀ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ನೂರು ಶಿಕ್ಷಣ ಸಂಸ್ಥೆಗಳಲ್ಲಿ ಮಕುಟ ಪ್ರಾಯವಾದುದು. ತುಮಕೂರು ನಗರದ ಕೀರ್ತಿಯನ್ನು ಗರಿಗೆದರಿ ಪ್ರಸರಿಸಿದ ರತ್ನಮಂಗಳ ಕಲಶ. ಗ್ರಾಮೀಣ ಪ್ರತಿಭೆಗಳು ವಿಕಾಸವಾಗಲು ಉದಯವಾದ ಹಿನ್ನೆಲೆ. ಸರ್ಕಾರ ತಾಂತ್ರಿಕ ಕಾಲೇಜುಗಳಲ್ಲಿ ಪ್ರವೇಶಾವಕಾಶ ದೊರೆಯದೆ ನಿರಾಶರಾಗುವ ಸನ್ನಿವೇಶ ಕಲ್ಪಿತವಾದಾಗ 'ಹರ ಕರುಣೋದಯ' ದಂತೆ 'ಗುರುಕರುಣೋದಯದ' ಶ್ರೀ ರಕ್ಷೆಯಿಂದ ಸೇವಾ ಜೀವನಕ್ಕೆ ದೀಕ್ಷೆ ತೊಟ್ಟುನಿಂತದ್ದು. ತುಮಕೂರಿನ ಶಿಕ್ಷಣಾಭಿಮಾನಿಗಳ ಒತ್ತಾಸೆ, ಉದಾರ ದಾನಿಗಳಾದ ಲೋಕಸೇವಾನಿರತ ಶ್ರೀ ಜಿ. ಎ.ಂ ಸಿದ್ದರಾಮಣ್ಣ, ಶ್ರೀ ಟಿ. ಎನ್. ಕೆಂಪಹೊನ್ನಯ್ಯ, ಶ್ರೀ ಎಂ. ವಿ. ಶಿವಪ್ಪ, ಶ್ರೀ ಎ. ಕೆ. ಪಾರ್ಶ್ವನಾಥ್, ಶ್ರೀ ಜಿ ಸಿ. ನಂಜುಂಡಯ್ಯ, ಡಾ॥ ಟಿ. ಎಸ್. ಮಲ್ಲಿಕಾರ್ಜುನಯ್ಯ ಮತ್ತಿತರ ಹಿರಿಯರ ಸಕ್ರಿಯ ಸಹಕಾರ, ನಗರದ ವರ್ತಕರ ತುಂಬು ಸಹಕಾರ, ವಿಶ್ವವಿದ್ಯಾನಿಲಯ, ಸರ್ಕಾರದ ಸಲಹೆ, ಮಾರ್ಗದರ್ಶಗಳ ಪೂರ್ಣ ಬೆಳಕಿನಲ್ಲಿ ಎಸ್.ಐ.ಟಿ. ಅರಳಲು ಆರಂಭ. ಪ್ರಾರಂಭದಲ್ಲಿ ಶ್ರೀ ಸಿದ್ಧಗಂಗಾ ಪ್ರೌಢಶಾಲೆ ಕಟ್ಟಡದಲ್ಲಿ ಕಾರ್ಯಾರಂಭ, ಹಂತ ಹಂತವಾಗಿ ಪ್ರಗತಿಯ ಮುನ್ನೋಟ, ಮುನ್ನಡೆಗೆ ತ್ರಿಕರಣ ಶುದ್ಧಿಯ ದುಡಿತ, ಪ್ರಾಚಾರ್ಯರಾಗಿ ಸೇವಾರಂಭ ಮಾಡಿದ ಶ್ರೀ ಜಿ. ಎಸ್. ಶಿವಣ್ಣನವರ ಪ್ರಾಮಾಣಿಕ ದಕ್ಷತೆಯಿಂದಾಗಿ ಸಂಸ್ಥೆ ಅಭಿವೃದ್ಧಿ ಪಥಗಾಮಿಯಾಯಿತು. ಶ್ರೀ ಶಿವಣ್ಣನವರಿಗೆ ಸಹಕಾರ ನೀಡುತ್ತ ಸಂಸ್ಥೆಯ ಪ್ರಗತಿಯನ್ನೇ ಪ್ರಧಾನವನ್ನಾಗಿಟ್ಟುಕೊಂಡು ಶ್ರೀ ಎಂ. ಚಿಕ್ಕಣ್ಣಯ್ಯಪ್ಪನವರ ಜನಾನುರಾಗ, ಅಧಿಕಾರಿವರ್ಗದಲ್ಲಿ ಗಳಿಸಿದ ಸ್ನೇಹ ವಿಶ್ವಾಸಗಳು ಸಂಸ್ಥೆಯ ಬೆಳವಣಿಗೆಗೆ ಬಲ ನೀಡಿತು. ಪ್ರಾಚಾರ್ಯರಾಗಿಯೂ ಸೇವೆ ಸಲ್ಲಿಸಿದ ಶ್ರೀ ಚಿಕ್ಕಣ್ಣಯಪ್ಪನವರು ಎಸ್ ಐ.ಟಿ.ಯ ಬೆಳವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದು ವಿಶೇಷ. ಅನಂತರ ಪಾಚಾರ್ಯರಾಗಿ ಬಂದ ಶ್ರೀ ಕರಕರೆಡ್ಡಿಯವರು ಅಪರೂಪದ ವ್ಯಕ್ತಿ. ಸರಳತೆ, ಸಜ್ಜನಿಕೆ, ನಿಯಮ ನಿಷ್ಠೆಗೆ ಮತ್ತೊಂದು ಹೆಸರು. ಸಂಸ್ಥೆಯ ಬೆಳವಣಿಗೆಯಲ್ಲಿ ಎಲೆಮರೆಯ ಹೂವಾಗಿ ಅರಳಿದರು. ಶ್ರೀ ಕುಮಾರಸ್ವಾಮಿಯವರು ಸಂಭಾವಿತ ಆಡಳಿತಗಾರರೆಂದೇ ಹೆಸರಾದವರು. ಇದೀಗ ಪಾಚಾರ್ಯರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಜಿ. ಪರಮೇಶ್ವರಪ್ಪನವರು ದಕ್ಷತೆಗೆ, ಸಮಯೋಚಿತ ನಿರ್ಧಾರ ತೆಗೆದು ಕೊಳ್ಳುವ ಮನೋಧರ್ಮಕ್ಕೆ

ಉದಾಹರಣೆ. ದಿನಾಂಕ 1.3.91 ಮತ್ತು 2.3.91 ರಂದು ಬೆಳ್ಳಿ ಹಬ್ಬವನ್ನು ನಗರದ ವಿಶಿಷ್ಟ ಹಬ್ಬವೆನ್ನುವಂತೆ ಆಚರಿಸಲಾಯಿತು. ರಾಜ್ಯದ ರಾಜ್ಯಪಾಲರು, ಶಿಕ್ಷಣ ಸಚಿವರು, ಆರೋಗ್ಯ ಸಚಿವರು, ಬೆಂಗಳೂರು, ಮಂಗಳೂರು, ಗುಲ್ಬರ್ಗ, ಕುವೆಂಪು ವಿಶ್ವವಿದ್ಯಾಲಯಗಳ ಕುಲಪತಿಗಳು, ತಾಂತ್ರಿಕ ಶಿಕ್ಷಣದ ನಿರ್ದೇಶಕರು, ಕೇಂದ್ರ ಸಂಪುಟದ ಮಾಜಿ ಸಚಿವರುಗಳು ಸಮಾರಂಭದಲ್ಲಿ ಭಾಗಿಗಳಾಗಿ ವಿಶೇಷ ಶೋಭೆಯನ್ನುತಂದರು. ಶ್ರೀ ಸಂಸ್ಥೆಯಲ್ಲಿ ಅಧ್ಯಯನ ಮಾಡಿದ ಎಲ್ಲ ವಿದ್ಯಾರ್ಥಿಗಳಿಗೆ ನೆನಪಿನ ಉಡುಗೊರೆಯನ್ನು ಕೊಟ್ಟದ್ದು ಅವಿಸ್ಮರಣೀಯವಾಗಿತ್ತು. ದೇಶ ವಿದೇಶಗಳಲ್ಲಿ ಸೇವೆಸಲ್ಲಿಸುತ್ತಿರುವ ಎಸ್. ಐ. ಟಿ. ಯ ವಿದ್ಯಾರ್ಥಿಗಳು ತಮ್ಮ ಬದುಕನ್ನು ರೂಪಿಸಿದ ಸಂಸ್ಥೆಯ ಬೆಳ್ಳಿಹಬ್ಬದಲ್ಲಿ ಬೆರೆತು ಸಂತೋಷಿಸಿದರು. ಸಂಸ್ಥೆಯ ಕೀರ್ತಿಗೆ ಪಾತ್ರರಾದ ಪ್ರಾಧ್ಯಾಪಕರು ಹಾಗೂ ಸಿಬ್ಬಂದಿ ವರ್ಗದವರಿಗೆ ಶ್ರೀ ಸಿದ್ಧಂಗಾ ವಿದ್ಯಾ ಸಂಸ್ಥೆಯ ಆಡಳಿತ ಮಂಡಳಿ ನೆನಪಿನ ಉಡುಗೊರೆಯನ್ನು ಕೊಟ್ಟು ಗೌರವಿಸಿತು. ಪ್ರಾಚಾರ್ಯರಾಗಿ ಸೇವೆಸಲ್ಲಿಸಿದೆಲ್ಲ ಮಹನೀಯರನ್ನು ಸನ್ಮಾನಿಸಿತು. ತಮ್ಮ ಜೀವನಕ್ಕೆ ಸ್ಫೂರ್ತಿನೀಡಿ ಬೆಳಕಿನೆಡೆಗೆ ನಡೆಯುವಂತೆ ಆಶೀರ್ವದಿಸಿದ ಸಂಸ್ಥೆಯ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರಸ್ವಾಮಿಗಳವರಿಗೆ ವಿದ್ಯಾರ್ಥಿಗಳು ರಜತ ಫಲಕವನ್ನರ್ಪಿಸುವುದರ ಮೂಲಕ ಕೃತಜ್ಞತೆಗಳನ್ನು ಸಮರ್ಪಿಸಿದರು.

ಶ್ರೀ ಸಿದ್ಧಗಂಗಾ ವಿಶ್ವವಿದ್ಯಾಲಯ ಅನತಿ ಕಾಲದಲ್ಲಿಯೇ ಅಸ್ತಿತ್ವಕ್ಕೆ ಬರುವ ಸಂದರ್ಭ ಸನ್ನಿಹಿತವಾಗುತ್ತಿದೆಯೆಂದು ಸಮಾರಂಭಕ್ಕೆ ಆಗಮಿಸಿದ್ದ ಎಲ್ಲ ಗಣ್ಯ ಅತಿಥಿಗೂ ಹಾರೈಸಿದರು.

# " ಜ್ಯೋತಿಯಾಗಿ ಬಾ "

ಜೆ. ಬಿ. ಲಿಂಗರಾಜು, ಬಿ.ಎ., ಜ್ಯೋತಿಮಲ್ಲಾಪುರ.

ಮರಳಿ ಬಾ ಬೆಳಗಿಸು ಜಗದ ಜ್ಯೋತಿಯ
ಮಹಾಯೋಗಿ ಮಹಾತ್ಯಾಗಿ ಜಗಜ್ಯೋತಿಯೆ ।

ಶಿವಾನುಭವ ಮಂಟಪದ ಮಹಾಕಿರಣ ಬಾ
ಶಿವನನಾರಾಧಿಸಿದ ಮಹಾಶರಣ ಬಾ
ವಚನ ವಾಙ್ಮಯಗಳ ಪ್ರಭೆಯ ಚೆಲ್ಲುಬಾ
ಮಾನವಗೆ ನೀತಿಮಯ ಸುಧೆಯ ಸೊಲ್ಲುಬಾ ॥

ತಪೋಭೂಮಿ ಭಾರತದಿ ಜನ್ಮತಳೆದು ಬಾ
ಜ್ಯೋತಿಯಲ್ಲೊದಗಿದ ಜ್ಯೋತಿಯಾಗಿಬಾ
ನಾಡಿನಿರುಳಕಳೆದು ಕಲ್ಯಾಣವೆನಿಸುಬಾ
ಆಚಾರಧರ್ಮಸಾರ ಧಾರೆ ಹರಿಸುಬಾ ॥

ಜ್ಞಾನದಾನಗೈದು ಜಗವ ಉದ್ಧರಿಸುಬಾ
ಕಾಯಕದ ಕೈಲಾಸವೆನಿಸು ಉದ್ಭವಿಸುಬಾ
ನೀತಿ ನೆಲಯ ಬೋಧಿಸಿ ಗುರುವೆ ನಿಲ್ಲುಬಾ
ಭೇದಭಾವ ಛೇಧಿಸುವ ವರವ ಚೆಲ್ಲುಬಾ ॥

ಜ್ಞಾನಗಂಗೆ ಧರೆಗೆ ಹರಿಸಿ ಬೆಳಗುತಬಾ
ಕೂಡಲ ಸಂಗಮದಿ ಜಂಗಮನೆ ಬಾ
ಶಿವನ ಶಿರದಿ ಮುಡಿಸಿದ ಹೂವಾಗಿಬಾ
ಮಾನವರೆದೆಯೊಳು ಚೇತನವನು ತಾ ॥

ಹೊಮ್ಮಿಸುತ ಹೊಸಕಳೆಯ ಧರ್ಮಸಾರುಬಾ
ಜಗದ ಮನೆಯೊಳವ ತರಿಸಿ ಜ್ಯೋತಿಯಾಗಿಬಾ
ಚಿಮ್ಮಿಸುತ ಚೇತನವ ಪೂರ್ಣಗೊಳಿಸುಬಾ
ಯುಗದ ಕೊಳೆಯ ಕನಿಕರಿಸಿ ಕೊಳ್ಳಖ್ಯಾತಿಬಾ ॥

# ಬಸವ ತತ್ತ್ವ ರತ್ನಾಕರ — 2

## ಷಟ್‌ಸ್ಥಲಾತ್ಮಕ ವಚನಗಳು

— ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ, (ಬೆಳಗಾವಿ ಜಿಲ್ಲೆ.)

### ಅನಾದಿ ಶರಣ ಬಸವಣ್ಣ ಉದಯು – 15.

ಆದಿ ಆಧಾರವಿಲ್ಲದಂದು ಸುರಾಳ ನಿರಾಳವಿಲ್ಲದಂದು,
ಶೂನ್ಯ ನಿಶ್ಶೂನ್ಯವಿಲ್ಲದಂದು ನಾದಬಿಂದು ಕಳೆಗಳಿಲ್ಲದಂದು,
ಆಕಾಶ ಪ್ರಕಾಶಗಳಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು,
ಶ್ರೀ ಶೈಲ ಮಲ್ಲಿಕಾರ್ಜುನಾ, ನಿಮ್ಮ ಶರಣ ಬಸವಣ್ಣ ಉದಯುವಾದನಂದು."

### ಮಹಾಲಿಂಗ ವೃಕ್ಷ ಉತ್ಪತ್ತಿ - 16

ಪರಶಿವ ಮಹಾಮಂತ್ರಮೂರ್ತಿ ಬಸವರಾಜ ಮಹಾದೇವ ನೋಡಾ,
ಪರಶಿವ ತತ್ತ್ವವೆಂದಡುಂ ಒಂದೆ ! ಬಸವತತ್ತ್ವವೆಂದಡುಂ ಒಂದೆ ! ನೋಡಾ.
ಇಂತಿವು ಒಂದೆ ನಾಣ್ಯದ ಎರಡು ಮುಖಗಳಿದ್ದಂತೆ ನೋಡಾ !
ಬಸವ ತತ್ತ್ವವೆಂದಡೆ ಶಿವಸಮುದ್ರವಿದ್ದಂತೆ ನೋಡಾ !
ಆ ಶಿವಸಮುದ್ರದೊಳಗಣ ಅನರ್ಘ್ಯ ರತ್ನಂಗಳೆಲ್ಲ ಪ್ರಮಥಗಣ ನೋಡಾ.
ಈ ರತ್ನಂಗಳರಾಶಿಯಲ್ಲಿ ಅನರ್ಘ್ಯ ರಹಸ್ಯ ರತ್ನಂಗಳೂ ಉಂಟು ನೋಡಾ.
ಇಂತಪ್ಪ ಅನಾದಿ ಶರಣ ಬಸವೇಶ್ವರ ಮಹಾತ್ಮ್ಯೆಗೆ ಆದಿ ಅಂತ್ಯವಿಲ್ಲ ನೋಡಾ.
ಬಸವೇಶ ಬ್ರಹ್ಮಾಂಡ ಸೃಷ್ಟಿ ಲೀಲೆ ಅನಂತಾನಂತರೂಹುದಳೆದು
'ಮಹಾಲಿಂಗ ವೃಕ್ಷವಾಗಿ ಅನಾದ್ಯನಂತವಾಗಿ ಬೆಳೆದು ನಿಂದಿತ್ತು.
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ ! "

### ಮಹಾಲಿಂಗ ಲೀಲೆ – 17

"ಶರಣನ ಮೂರ್ತಿಯಿಂದಲಾದ ಸದಾಶಿವ.
ಆ ಸದಾಶಿವನ ಮೂರ್ತಿಯಿಂದಲಾದ ಶಿವ.
ಆ ಶಿವನ ಮೂರ್ತಿಯಿಂದಲಾದ ರುದ್ರ
ಆ ರುದ್ರನ ಮೂರ್ತಿಯಿಂದಲಾದ ವಿಷ್ಣು.
ಆ ವಿಷ್ಣುವಿನ ಮೂರ್ತಿಯಿಂದಲಾದ ಬ್ರಹ್ಮ.
ಆ ಬ್ರಹ್ಮನ ಮೂರ್ತಿಯಿಂದಲಾದವು ಸಕಲ ಜಗತ್ತುಗಳೆಲ್ಲಾ !
ಇವರೆಲ್ಲ ನಮ್ಮ ಶ್ರೀ ಶೈಲ ಮಲ್ಲಿಕಾರ್ಜುನನ ಕರಸ್ಥಲದ ಹಂಗಿನಲ್ಲಿ ಬೆಳೆದರು."

"ಪ್ರಪ್ರಥಮದಲ್ಲಿ ಪರವಸ್ತು ಅನಿರ್ವಚನೀಯವಾಗಿದ್ದಿತ್ತು.
ಆ ಅನಿರ್ವಚನೀಯವಾಗಿದ್ದ ಪರವಸ್ತು ತನ್ನ ಲೀಲೆಯಿಂದ
ತಾನೆ ಪರಬ್ರಹ್ಮವೆಂಬ ಹೆಸರಾಯಿತ್ತು.
ಆ ಪರಬ್ರಹ್ಮವೆಂಬ ಹೆಸರು ಹೊಂದಿ ಕುಳವಾಯಿತ್ತು.
ಆ ಕುಳದಿಂದ ಆತ್ಮನೆಂಬ ಲಿಂಗಸ್ಥಲವಾಯಿತ್ತು.
ಆ ಸ್ಥಳ ಕುಳದೊಳಗೆ ಹೊಂದಿ (ಕೂಡಿ) ಸ್ಥಳ ಕುಳವೆಂಬರಡಿಲ್ಲದೆ ನಿಂದಿತ್ತು.

ಅದು ಹೇಗೆಂದಡೆ :

ವಾಙ್ಮನಕಗೋಚರವಾದ ಪರಬ್ರಹ್ಮದಿಂದ ಭಾವವಾಯಿತ್ತು.
ಭಾವದಿಂದ ಜ್ಞಾನವಾಯಿತ್ತು. ಜ್ಞಾನದಿಂದ ಮನವಾಯಿತ್ತು.
ಮನದಿಂದ ಬುದ್ಧಿಯಾಯಿತ್ತು, ಬುದ್ಧಿಯಿಂದ ಚಿತ್ತಾಯಿತ್ತು.
ಚಿತ್ತದಿಂಡ ಅಹಂಕಾರವಾಯಿತ್ತು.
ಇಂತೀ ಅಹಂಕಾರ ಚಿತ್ತ ಬುದ್ಧಿ ಮನ ಜ್ಞಾನ ಭಾವವೆಂದಾರಾದವು.
ಈ ಆರೂ ಕೆಟ್ಟಲ್ಲದೆ ವಾಙ್ಮನಕ್ಕ ಗೋಚರವಾದ ಪರಬ್ರಹ್ಮವಾಗಬಾರದು,
ಇವ ಕೆಡಿಸುವಡಕ್ಕೆ ಆರು ಸ್ಥಲವಾದವು.

ಅವಾವವೆಂದಡೆ :

ಅಹಂಕಾರವಡಗಿದಾಗ ಭಕ್ತಿಸ್ಥಲವಾಯಿತ್ತು.
ಚಿತ್ತದ ಗುಣ ಕೆಟ್ಟಾಗ ಮಾಹೇಶ್ವರ ಸ್ಥಲವಾಯಿತ್ತು.
ಬುದ್ಧಿಯ ಗುಣ ತೊರೆದಾಗ ಪ್ರಸಾದಿ ಸ್ಥಲವಾಯಿತ್ತು.
ಮನೋಗುಣವಳಿದಾಗ ಪ್ರಾಣಲಿಂಗಿ ಸ್ಥಲವಾಯಿತ್ತು.
ಜೀವನ ಗುಣಸಂದಾಗ ಶರಣ ಸ್ಥಲವಾಯಿತ್ತು.
ಭಾವ ನಿರ್ಭಾವವಾದಾಗ ಐಕ್ಯಸ್ಥಲವಾಯಿತ್ತು.
ಇಂತೀ ಷಟ್‌ಸ್ಥಲವಾಗಿ ವಾಙ್ಮನಕ್ಕಗೋಚರವಾದ ಬ್ರಹ್ಮವೆ ಆತ್ಮನು.
ಆ ಆತ್ಮನಿಂದ ಆಕಾಶ ಹುಟ್ಟಿತ್ತು.
ಆ ಆಕಾಶದಿಂದ ವಾಯು ಹುಟ್ಟಿತ್ತು.
ಆ ವಾಯುವಿನಿಂದ ಅಗ್ನಿ ಹುಟ್ಟಿತ್ತು.
ಆ ಅಗ್ನಿಯಿಂದ ಅಪ್ಪು ಹುಟ್ಟಿತ್ತು.
ಆ ಅಪ್ಪುವಿನಿಂದ ಪೃಥ್ವಿ ಹುಟ್ಟಿತ್ತು.
ಇಂತೀ ಕುಳ ಸ್ಥಳವಾಗಿ ಸ್ಥಳಕುಳವಾದ ವಿವರವೆಂತೆಂದಡೆ:
ಪೃಥ್ವಿ ಅಪ್ಪುವಿನೊಳಡಗಿ, ಅಪ್ಪು ಅಗ್ನಿಯೊಳಡಗಿ,

ಅಗ್ನಿ ವಾಯುವಿನೊಳಡಗಿ, ವಾಯು ಆಕಾಶದೊಳಡಗಿ,
ಆಕಾಶ ಆತ್ಮನೊಳಡಗಿತ್ತು; ಆತ್ಮ ಪರಶಿವನಲ್ಲಿ ಅಡಗಿತ್ತು.

ಇಂತೀ ಷಡಂಗವಡಗಿದ ಪರಿಯೆಂತೆಂದಡೆ :

ಪೃಥ್ವಿ ಭವೇತ್ ಜಲೇ ಮಗ್ನಾಜಲಂ ಗ್ರಸ್ತಂ ಮಹಾಗ್ನಿನಾ ।
ವಾಯೋರಸ್ತಮಿತಂ ತೇಜೋವ್ಯೋಮ್ನಿ ವಾಕೋ ವಿಲೀಯತೇ ।
ವ್ಯೋಮಾತ್ಮನಿ ವಿಲೀನಂ ಸ್ಯಾತ್ ಆತ್ಮಾಪರಶಿವೇ ಪದೇ ॥ ಎಂದುದಾಗಿ,
ಆತ್ಮನು ಪರಬ್ರಹ್ಮದೊಳಡಗಿ ನಿಂದಿತ್ತು ಶ್ರೀ ಶೈಲ ಮಲ್ಲಿಕಾರ್ಜುನ. ”

## ಪ್ರಭುವಾಣಿ–19

“ಬಸವಾ ! ‘ನೀ ಮಾಡಲಾಗಿ ಆನಾದೆನು’ ಎಂಬಾ ಅಲ್ಲಮಪ್ರಭು ಅಮೃತವಾಣಿ:
“ ಧರೆಯಾಕಾಶ ತಾರಾಮಂಡಲ ಸಪ್ತ ಸಮುದ್ರಗಳಿಲ್ಲದಂದು,
ಒಂದು ಮಹಾ ವೃಕ್ಷವಿದ್ದಿತ್ತಯ್ಯಾ.
ಆ ವೃಕ್ಷವ ಕಂಡು ನಾನು “ ಓಂ ನಮಃ ಶಿವಾಯ ” ಎನುತಿದ್ದೆನು.
ಆ ವೃಕ್ಷದಿಂದ ಷಡು ಸಾದಾಖ್ಯಂಗಳು ಪುಟ್ಟಿದವು.
ಆ ಷಡು ಸಾದಾಖ್ಯಂಗಳ ನೆಳಲಲ್ಲಿ ಕುಳ್ಳಿರ್ದು.

ನಾನು ಬಸವಾ ಬಸವಾ ಬಸವಾ ಎನುತಿರ್ದೆನು ಕಾಣಾ ಗುಹೇಶ್ವರಾ.”
ಇಂತೆಂದುದಾಗಿ ಅನಾದಿ ಶರಣ ಬಸವರಾಜದೇವರ ಅಪಾರ ಅನಂತ ಮಹಾತ್ಮ್ಯೆಯಂ ಆ ಸಹಸ್ರ ನಾಲಗೆಯಾ ಆದಿ ಶೇಷಂಗೆ ಬಣ್ಣಿಸಲಸದಳವಾಗಿರಲ್ಕೆ ಇನ್ನು ಆನೆಂತು ವರ್ಣಿಪುದು ಹೇಳಾ ? ಶ್ರೀ ಶೈಲ ಮಲ್ಲಿಕಾರ್ಜುನ ! ”

## ಬಸವ ಮಂತ್ರ ಮಹಾತ್ಮ್ಯೆ – 20

“ ಅಯ್ಯಾ! ಅನಾದಿ ಶರಣ ಬಸವಣ್ಣ ಮಹಾಮಂತ್ರಮೂರ್ತಿಯಾಗಿರ್ದ ನೋಡಾ!
“ ಓಂ ನಮಃ ಶಿವಾಯ ” “ ಶಿವಮಂತ್ರ ” ವಿದು ಸಪ್ತಕೋಟಿ ಮಂತ್ರಂಗಳಿಗೂ ಅಧಿಕಮೆನಿಸಿ ಸಕಲ ಸುಖ ಸಿದ್ಧಿಪ್ರದಾಯಕವೆನಿಸಿರ್ಪುದು ನೋಡಾ !

## ಶಿವ ಮಂತ್ರ ಮಹಿಮೆ

ಕಂದ॥ ಸಲೆ ಸಪ್ತಕೋಟಿ ಮಂತ್ರಂ।
ಗಳಿಗಧಿಕಮೆನೆ ಮಿಗೆ ಕಂಗೊಳಿಪ ಶಿವಮಂತ್ರಂ॥
ಒಲವಿನಲಿ ಶರಣನನಿಶಂ।
ನಲಿನಲಿದು ನುತಿಸುತಿರಲಿಳೆಯೊಳ್ ಬೆಳಗುವದಯ್

(– "ಕನ್ನಡ ಕವಿ ಕಾಳಿದಾಸ" ಕೃತ "ಶಿವಾನುಭವದರ್ಪಣ" ಪ.೧೪)

ಇಂತೆಂದುದಾಗಿ ಶಿವಮಂತ್ರದಿಂದಧಿಕ ಮಂತ್ರವಿಲ್ಲೆಂಬ ಸಕಲ ಶ್ರುತಿವಾಣಿ ಸಾರ್ವಕಾಲಿಕ (ತ್ರಿಕಾಲ) ನಿಜಕ್ಕೂ ಸತ್ಯ ನೋಡಾ.

ಇಂತಪ್ಪ ಮಂತ್ರ ಮೂರ್ತಿ ಆ ಶಿವನಂ ಸೃಷ್ಟಿಸಿ, ಆ ಪರಶಿವನ ಮಹಿಮೆಯಾ 'ಓಂ ನಮಃ ಶಿವಾಯ' ಎಂಬ ಶಿವಮಂತ್ರ ಮಹಾತ್ಮೆಯಂ ತೋರಿ ಶಿವ ಸರ್ವೋತ್ತಮತ್ತ್ವಮಂ ಸಾರಿ ನಿಂದಾತ ಪರಶಿವ ಸಾಕಾರಮೂರ್ತಿ ಬಸವರಾಜ ದೇವರು ನೋಡಾ !

ಇಂತಪ್ಪ 'ಓಂ ನಮಃ ಶಿವಾಯ' ಶಿವಮಂತ್ರದಾ ಶಿವತತ್ತ್ವರತ್ನಂಗಳೆಲ್ಲವೂ ಈ ಅನಾದಿ ಶರಣ ಬಸವತತ್ತ್ವಸಾಗರದೊಳ್ ಹುದುಗಿರ್ದವು ನೋಡಾ !

'ಓಂ ನಮಃ ಶಿವಾಯ' ಈ ಶಿವಮಂತ್ರರಹಸ್ಯಾರ್ಥವನೆಲ್ಲವಂ ಒಳಗೊಂಡಿಪ್ಪಾ 'ಶ್ರೀ ಗುರು ಗುರುಬಸವಲಿಂಗಾಯ ನಮಃ' 'ಬಸವ ಮಂತ್ರ' ಮಹಾತ್ಮೈ ನೋಡಾ !

---

**ವಿ.ಸೂಚನೆ:-** ದಿ-20-9-1990ರಂದು "ಬಸವಾವತಾರಿ" ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಸಿದ್ದಗಂಗಾ ಅವರ ಕೃಪಾಶೀರ್ವಾದವಾಗಿ "ಕನ್ನಡ ಕವಿ ಕಾಳಿದಾಸರ ಸಾಹಿತ್ಯ ಸೇವೆಯನ್ನು ಗುರುತಿಸಿ ಕಳಿಸಲಾದ 180 ರೂ ಬೆಳಗಾವಿ ವಿಜಯಬ್ಯಾಂಕಿನ ಡ್ರಾಪ್ಟನ್ನು ತುಂಬುಹೃದಯದಿಂದ ಸ್ವೀಕರಿಸಲಾಗಿದೆ. ಪರಮ ಪೂಜ್ಯ ಶ್ರೀಗಳವರು 'ವಿಶ್ವಧರ್ಮ ಸಂಸ್ಥೆಯ ನಿರ್ಮಾಪಕರಾಗಿ ಹಲವಾರು ವಿದ್ಯಾಸಂಸ್ಥೆಗಳನ್ನು ನಡೆಯಿಸುತ್ತಾ ಸರ್ವಧರ್ಮಸಮನ್ವಯಾತ್ಮಕ ದೃಷ್ಟಿಯಿಂದ ನಿತ್ಯವೂ ಹತ್ತಾರು ಸಾವಿರ ಸಂಖ್ಯೆಯಲ್ಲಿ ವಿದ್ಯಾರ್ಥಿ ವೃಂದವನ್ನು ಮಾತ್ರ ವಾತ್ಸಲ್ಯ ಪೂರಿತ ಹೃದಯರಾಗಿ ಕಾಪಾಡುತ್ತ ಬಂದಿರುವುದು ನಮ್ಮ ನಾಡು ಹಾಗೂ ಭಾರತ ಮಾತ್ರವಲ್ಲ ಇಡಿಯ ವಿಶ್ವದ ಭಾಗ್ಯವೆಂದೇ ಹೇಳಬೇಕು. ಶ್ರೀ ಶ್ರೀ ಗಳವರು ಕೈಗೊಂಡ ಈ ಮಹಾಮಣಿಹವು ಪೂರ್ತಿಯಾಗಲೆಂದೂ. ಮನುಕುಲಕೆ ಆ ವಿಭೂತಿಗಳ ಕೃಪೆಯಿಂದ ಸುಖ ಸಮೃದ್ಧಿಯುಂಟಾಗಲೆಂದೊ ಹಾರೈಸಿ ಪೂಜ್ಯರ ಪಾದಕಮಲಗಳಲ್ಲಿ ಅನಂತ ಕೋಟಿ ಪ್ರಣಾಮಗಳನ್ನು ಸಲ್ಲಿಸಲಾಗಿದೆ.

'ಶ್ರೀ ಗುರುಬಸವಲಿಂಗಾಯ ನಮಃ' ವ್ಯಾಖ್ಯೆ ಇಂತು:

ಶ್ರೀ—ಷಡ್ಗುಣೈಶ್ವರ್ಯಯುಕ್ತವಾದ ಸಂಪತ್ಕರವನುಳ್ಳಂಥ
ಗುರು—ಪರಮಪೂಜ್ಯ ಪ್ರಭು ಮುಕ್ತಿಪ್ರದಾಯಕನಾದಂಥ
ಬಸವ—'ಬ' ಕಾರವೆ ಭವಹರ ಗುರು, 'ಸ'ಕಾರವೆ ಸಕಲ ಚೈತನಾತ್ಮಕ ಲಿಂಗವು
'ವ' ಕಾರವೆ ವಚಿಸುವುದಕ್ಕೆ ಕಾರಣವಾದ ಮಹಾನುಭಾವ ಮೂರ್ತಿಯಪ್ಪ
ಜಂಗಮವು. ಇಂತೀ 'ಗುರು ಲಿಂಗ ಜಂಗಮ' ಸ್ವರೂಪವಾದ
ಲಿಂಗ—ಲಯಗಮನಂಗಳಿಗಾಲಯವಾದ ಮಹಾಲಿಂಗವು'
ಅಯ—ಅಂತಪ್ಪ ಇಷ್ಟಸ್ವರೂಪವಾದಾತನೇ ಬಸವೇಶ್ವರನು.
ಅಂತಹ ಸಂಗನ ಬಸವೇಶ್ವರ ಸ್ವಾಮಿಗಳೆಂಬ ಮಹಾಜ್ಞಾನ ಗುರುತತ್ವಕ್ಕೊಸ್ಕರ,
ನಮಃ—ಸಹಜಭಕ್ತಿಭಾವಾನಂದಯುಕ್ತ ನಮಸ್ಕಾರವು.

|| 'ಶ್ರೀ ಗುರುಬಸವಲಿಂಗಾಯ ನಮಃ' ||

ಶ್ರೀ—ಐಶ್ವರಸ್ಯ ಸಮಗ್ರಸ್ಯ ವೀರ್ಯಸ್ಯಯಂಶಸಃ ಶ್ರಿಯಃ ।
ಜ್ಞಾನ ವೈರಾಗ್ಯಯೋಶ್ಚೈವಷಣ್ಣಾಂಭಗಇತೀರಿತಃ ॥
**ಗುರು**—ಗುಕಾರಸ್ತ್ವರೂಪಂಚ ರುಕಾರೋ ಮಮರೂಪಕಃ ।
ಉಭಯೋಸ್ಸಂಗ ಸೌಖ್ಯಂಚಗುರೋರ್ವರ್ಣಂಜಪೇತ್ಸುಧೀಃ ॥
**ಗುಕಾರ**ಸ್ತ್ರೈಲವರ್ತಂ ಚರುಕಾರಂ ಜ್ವಲನಸ್ಮೃತಃ ।
ದ್ವಯೋರ್ಯೋಗ ಪ್ರಭಾವೇಣ ಸ್ವಯಂಜ್ಯೋತಿರ್ಗುರು ಸ್ಸ್ಮೃತಃ ॥
ನಮುಕ್ತಿರ್ನಚ ಧರ್ಮಶ್ಚನ ಪುಣ್ಯಂಚನ ಪಾಪಕಂ ।
ನಕರ್ಮ ಜನ್ಮನಶ್ಚೈವ ಗುರುಪಾದ ನಿರೀಕ್ಷಣಾತ್ ॥
ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ ।
ಗುರುದೈವಾತ್ಪರಂ ನಾಸ್ತಿತಸ್ಮೈ ಶ್ರೀ ಗುರುವೇ ನಮಃ ॥
ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್‌ಸ್ಥಲ ಬ್ರಹ್ಮಮೂರ್ತಯೇ ॥
ಧ್ಯಾನಮೂಲಂ ಗುರೋರ್ ಮೂರ್ತಿಃ ಪೂಜಾಮೂಲಂ ಗುರೋಃಪದಂ ।
ಮಂತ್ರಮೂಲಂ ಗುರೋರ್ವಾಕ್ಯಂ ಮುಕ್ತಿಮೂಲಂ ಗುರೋಃ ಕೃಪಾ ॥

**ಬಸವ**—ಬಕಾರೋ ಗುರುರೂಪಂ ಚ ಸಕಾರೋ ಲಿಂಗರೂಪಕಃ ।
ವಕಾರೋ ಚರ ರೂಪಂಚ ತ್ರಿವಿಧಂ ಬಸವಾಕ್ಷರಂ ॥
ಬಕಾರೋ ನಾದರೂಪಂ ಚ ಸಕಾರೋ ಬಿಂದು ರೂಪಕಃ ।
ಕಲಾರೂಪಂ ವಕಾರಶ್ಚ ತ್ರಿವಿಧಂ ಬಸವಾಹ್ವಯಂ ॥
ಬಕಾರೋ ಸತ್ವರೂಪಂ ಚ ಸಕಾರೋ ಚಿತ್ಸ್ವರೂಪಕಃ ।
ಆನಂದತ್ವಂ ವಕಾರಶ್ಚ ತ್ರಿವಿಧಂ ಲಕ್ಷಣಂ ಶಿವೇ ॥ ಎಂಬುದೀಗ,
**ಲಿಂಗ**—ಲಿಕಾರೋ ಲಯಸಂಪ್ರೋಕ್ತೋಗಕಾರಃ ಸೃಷ್ಟಿರೇವಚ।
ಲಯನಾದ್ಗಮನಾಚ್ಚೈವ ಲಿಂಗಾಕಾರ ಇಹೋಚ್ಯತೇ ॥
ಲೀಯತೇ ಗಮ್ಯತೇಯತ್ರ ಏತಸ್ಸರ್ವಂ ಚಾರಚರಂ ।
ತದೇತಲ್ಲಿಂಗ ಮಿತ್ಯಾಹುರ್ಲಿಂಗತತ್ತ್ವ ಪರಾಯಣಾಃ ॥
ಆಕಾಶಂ ಲಿಂಗಮಿತ್ಯಾಹುಃ ಪೃಥ್ವೀತ ಸ್ಯಾದಿ ಪೀಠಿಕಾ ।
ಆಲಯಂ ಸರ್ವಭೂತಾನಾಂ ಲಿಂಗಾಕಾರ ಇಹೋಚ್ಯತೇ ॥
ಲಿಂಗಮಧ್ಯೇ ಜಗತ್ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಲಿಂಗಬಾಹ್ಯಾತ್ ಪರಂ ನಾಸ್ತಿತಸ್ಮಾತ್ ಲಿಂಗಂಪ್ರಪೂಜಯಲತ್॥ ಎಂಬುದೀಗ
**ಅಯ**—ಇಷ್ಟ ಸ್ವರೂಪವಾದಾತನೇ ಸಂಗನ ಬಸವೇಶ್ವರನು. ಅಂತಪ್ಪ ಸಂಗನ ಬಸವೇಶ್ವರ ಸ್ವಾಮಿಗಳೆಂಬ ಮಹಾಜ್ಞಾನ ಗುರು ತತ್ತ್ವಕ್ಕೋಸ್ಕರ,
**ನಮಃ**—ನಮಸ್ಕಾರವೆಂದು ಈ ಶಾಸ್ತ್ರದ ಪ್ರಥಮ ಪ್ರಾರಂಭದಲ್ಲಿ ಪ್ರಮಥಾಚಾರ್ಯರು ಸಹಜ ಭಕ್ತಿ ಭಾವಾನಂದದಿಂ ಗುರು ನಮಸ್ಕಾರವ ಮಾಡಿ ಉದ್ಧರಿಸಿ ನಿರೂಪಿಸಿರ್ಪರು ಎಂಬುದೀಗ ಶ್ರೀ ಗುರುಬಸವಲಿಂಗಾಯ ನಮಃ ಎಂಬ ಬಸವ ಮಂತ್ರ ಮಹಾತ್ಮ್ಯೆಯ ವಿಶೇಷಾರ್ಥ. ಇಂತು ಮಹಾಜ್ಞಾನ ಗುರು ತತ್ತ್ವಸ್ವರೂಪ ನಾಗಿಪ್ಪ ಬಸವ ಮಂತ್ರ ಮಹಾತ್ಮ್ಯೆ ಯಿದುಕಾಣಾ ಶ್ರೀ ಶೈಲ ಮಲ್ಲಿಕಾರ್ಜುನ !

## ಶ್ರೀ ಗುರುಬಸವ ಲಿಂಗ ಲೀಲೆ!

(ಕಾವ್ಯ ಕಾಮಧೇನು)

ನ. ವೃ॥ "ಶರಣ ಮಧ್ಯೇ ಲಿಂಗ ಸಕಳಂ" ಲಿಂಗಮಧ್ಯೇ ಜಗತ್ ಸರ್ವಂ
ಶರಣ ಗುರುಃಲಿಂಗ ಜಂಗಮ ಭರಿತಂ ಚರಣ ಜಳ ಪ್ರಸಾದ ಹೃದಯಂ ॥
ಶರಣ ಬ್ರಹ್ಮಾಂಡಗತಂ ಸೃಷ್ಟಿಯುತ್ಪತ್ತಿಲಯ ಕಾರಣ ಪುರುಷಂ ।
ಶರಣ ನಿರಂಜನ ಬಸವಂ ಅನಾದಿ ಶರಣ ಪರಶಿವಂ ಪ್ರಭುವಂ ॥

—"ಧರ್ಮಜ್ಞ" ಕವಿಕೃತ "ಶ್ರೀ ಬಸವರಾಜ ದರ್ಶನಂ"
(ಮಹಾಛಂದಸ್ಸಿನ ಕಾವ್ಯ)

(ಲಿಂಗವು ತನ್ನ ಗರ್ಭದಲ್ಲಿ ಚರಾಚರಾತ್ಮಕವಾದ ಸಕಲ ವಿಶ್ವವನ್ನೇ ಇರಿಸಿಕೊಂಡಿದ್ದು ಶಿವಸ್ವರೂಪವಾಗಿ ಪೂರ್ಣವೆನಿಸಿದೆ. ಆದರೆ ಇಂತಹ ಮಹಾಲಿಂಗವನ್ನೇ ತನ್ನ ಹೃತ್ಕಮಲ ಮಧ್ಯದಲ್ಲಿರಿಸಿಕೊಂಡ ಅನಾದಿ ಶರಣ ಬಸವೇಶ್ವರನು ಗುರುಲಿಂಗ ಜಂಗಮ ಸ್ವರೂಪನೂ ಪ್ರಸಾದ ಹೃದಯನೂ ಬ್ರಹ್ಮಾಂಡವನ್ನೇ ವ್ಯಾಪಿಸಿದವನೂ ಸಕಲ ಸೃಷ್ಟಿಯುತ್ಪತ್ತಿಲಯ ಕಾರಣ ಪುರುಷನೂ ಎನಿಸಿ ಪರಶಿವಜ್ಞಾನ ಜ್ಯೋತಿಯೆನಿಸಿದ್ದಾನೆ.)

1. ಸೂಚನೆ:- 'ಶ್ರೀ ಗುರು ಬಸವಲಿಂಗಾಯ ನಮಃ' ಎಂಬ ಮಂತ್ರಾರ್ಥವನ್ನು ವಿವರಿಸುವಲ್ಲಿ- ಶ್ರೀ ಎಂ. ಎಂ. ಕಲಬುರ್ಗಿ ಅವರಿಂದ ಸಂಪಾದಿತವಾದ 'ಬಸವಣ್ಣನವರ ಲೇಕಿನ ವಚನಗಳು (ಸಂಪುಟ-೧) ಎಂಬೀಗ್ರಂಥದ ಸಹಾಯ್ಯವನ್ನು ನಾವು ಪಡೆದುಕೊಂಡುದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಯ ವಂದನೆಗಳು.

---

2, ದಿ-20-9-1990ರಂದು ಇಲ್ಲಿನ 'ಅನುಪಮ ಪ್ರಕಾಶನದವರಿಂದ ಗ್ರಂಥಗಳ ಬಿಡುಗಡೆ ಸಮಾರಂಭ ಹಾಗೂ ನಾಡಿನ ಗಣ್ಯರಿಗೆ ಸನ್ಮಾನ ನಡೆಯಿತು. ದಿವ್ಯಸನ್ನಿಧಿ ' ಅಲ್ಲಮಪ್ರಭುಪರಾವತಾರಿ ' ಡಾ|| ಜ. ಚ. ನಿ. ನೇತೃತ್ವ : ಶ್ರೀಶೈಲ ಸಾರಂಗಮಠದ ಶ್ರೀ ಪರಮ ಶಿವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ವಹಿಸಿದ್ದರು. ಡಾ|| ಜಿ. ಎಸ್, ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ; ಡಾ|| ಆರ್ ಸಿ. ಹಿರೇಮಠ ಅವರು ಉದ್ಘಾಟಕರಾಗಿಯೂ, ಮುಖ್ಯ ಅತಿಥಿಗಳಾಗಿ ಡಾ|| ಸಿದ್ಧಯ್ಯಪುರಾಣಿಕ, "ಕನ್ನಡ ಕವಿ ಕಾಳಿದಾಸ" ಶ್ರೀ ಮೋಟಗಿ ಮಲ್ಲಿಕಾರ್ಜುನರೂ ಆಗಮಿಸಿದ್ದರು. ಗ್ರಂಥಗಳಳ ಬಿಡುಗಡೆ ಶ್ರೀ ಮಹಾದೇವ ಬಣಕಾರ, ಶ್ರೀಮತಿ ಶಾಂತಾದೇವಿ ಮಾಳವಾಡ, ಶ್ರೀ ಎಸ್. ಎಂ. ವೀರಭದ್ರಯ್ಯ, ಸಿದ್ಧರಾಜ ಪೂಜಾರಿ ಮೊದಲಾದವರು ಬಿಡುಗಡೆ ಮಾಡಿದರು. ಡಾ|| ಜ. ಚ. ನಿ. ಅವರ 'ಜೀವನ ಸಿದ್ಧಾಂತ' ಗ್ರಂಥ ರತ್ನಗಳನ್ನು ಆನೆಯ ಮೇಲಿರಿಸಿ ಉತ್ಸವವು ಶ್ರೀ ಶಿವಯೋಗಿಗಳವರ ಗಚ್ಚಿನ ಮಠದಿಂದ ಕವಿಸಾಹಿತಿಗಳನ್ನು ಅನೇಕ ಕಾರು ಜೀಪು ಮೊದಲಾದ ವಾಹನಗಳಲ್ಲಿ ಕೂಡ್ರಿಸಿಕೊಂಡು ಒಳ್ಳೇ ವೈಭವದಿಂದ ಹೊರಟು ಎಸ್. ಎಂ. ಎಸ್. ಕಾಲೇಜದ ಕಲ್ಯಾಣಮಂಟಪಕ್ಕೆ ಬರಲಾಯಿತು. ಅಲ್ಲಿಯೇ ಕಾರ್ಯಕ್ರಮ ನಡೆಯಿತು ಡಾ|| ಆರ್. ಸಿ, ಹಿರೇಮಠ ಮತ್ತು ಸಿದ್ಧಯ್ಯ ಪುರಾಣಿಕ "ಕನ್ನಡ ಕವಿ ಕಾಳಿದಾಸ" ಮೊದಲಾದ ಗಣ್ಯಸಾಹಿತಿ ಕವಿಕಲಾವಿದರೆಲ್ಲರಿಗೂ ಶಾಲು ಹೊದಿಸಿ ಸತ್ಕರಿಸಲಾಯಿತು. ಪೂಜ್ಯ ಡಾ|| ಜ. ಚ ನಿ. ಅವರ ಎರಡು ದಿವಸಗಳ ವಾಸ್ತವ್ಯ ನಮ್ಮಲ್ಲಿಯೇ ಆಯಿತು. ಡಾ|| ಜ. ಚ. ನಿ. ಅವರ ಕೃತಿರತ್ನ ಪ್ರತಿಸ್ವಾತಂತ್ರದ ವಚನಕಾವ್ಯ 'ಮಾದೇವಿ' "ಕನ್ನಡ ಕವಿಕಾಳಿದಾಸ'' ರಿಂದ ಸಂಗ್ರಹಿಸಲಾದ ಈ ಸಂಪಾದನಾ ಕೃತಿಕುಸುಮ ಪೂಜ್ಯ ಜ. ಚ. ನಿ. ಅವರಿಂದಲೇ ಪ್ರಕಾಶಿತವಾಗಿ ಇಷ್ಟರಲ್ಲಿಯೇ ಹೊರಬರಲಿದೆ. ಶ್ರೀಗಳವರ ಶಿವಧರ್ಮ ಸಾಹಿತ್ಯ ಸೇವೆ ಅಪಾರ ! ಅನುಪಮ ! ಅನಂತ ! ಅವರ್ಣನೀಯ ! ಶ್ರೀ ಶ್ರೀ ಗಳವರು ಇನ್ನೂ ನೂರುಕಾಲ ನಮ್ಮೊಳಿದ್ದು ಮಾನವ ಕುಲಕೋಟಿಯನ್ನು ಉದ್ಧರಿಸುವಂತಾಗಲೆಂದು ಶ್ರೀ ಬಸವಾದಿ ಪ್ರಮಥರಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ ವಂದನೆಗಳೊಂದಿಗೆ.

# ಮಾನವ ಪ್ರೇಮ (ಚಿಂತನ)

ಜಿ.ಶಾರದಾರಾಜಶೇಖರ್ : 847, 4ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40

ಜಗತ್ತನ್ನೆಲ್ಲ ಗೆದ್ದು ಆತ್ಮವನ್ನೇ ಕಳೆದುಕೊಂಡರೆ, ನಮ್ಮ ದೃಢಕಲ್ಪನೆಗಳನ್ನೇ ಬಲಿಕೊಟ್ಟ ಜಗತ್ತಿನೊಂದಿಗೆ ಶಾಂತಿಯನ್ನು ಕೊಂಡರೆ ಅದರಿಂದ ಪ್ರಯೋಜನ ವಿಲ್ಲವೆಂದು ಏಸು ಹೇಳುತ್ತಾನೆ. ಆಂತರಿಕ ತಥ್ಯತೆ, ಆಧ್ಯಾತ್ಮಿಕ ನಿಜ್ಜಳ ಇವು ಮುಖ್ಯ, ಪಾಶ್ಚಾತ್ಯ ಧರ್ಮದ ಹೆಚ್ಚಳವೇನೆಂದರೆ ವ್ಯಕ್ತಿಯು ಇತರರಿಗೆ ಮಾಡುವ ಸೇವೆಯಲ್ಲಿ ತನ್ನ ಮುಕ್ತಿಯ ನ್ನು ಗಳಿಸಿಕೊಳ್ಳುತ್ತಾನೆ. ದೈವದೊಂದಿಗೆ ನಿಕಟಸಂಪರ್ಕ ಪಡೆಯಲು ಏಕಾಂತ ವಾಸಕ್ಕೆ ಹೊಂಟರೆ ಸಾಲದು. ಧರ್ಮವು ಜೀವನಾತೀತವಾದುದು ಮಾತ್ರವಲ್ಲ ಜೀವನವನ್ನು ಪರಿವರ್ತನ ಗೊಳಿಸಬಲ್ಲದು. ದುಃಖಾರ್ತರಾದ ಜನರಸೇವೆ ಮಾಡುವುದೇ ನಿಜವಾದ ಪೂಜೆ, ಧರ್ಮವು ಪ್ರತಿಯೊಬ್ಬ ಮನುಷ್ಯನ ಆತ್ಮವೂ ಅಪಾರವಾದ ಮೌಲ್ಯವುಳ್ಳದ್ದು ಎಂದು ಸಮರ್ಥಿಸುತ್ತದೆ. ಎಲ್ಲರೂ ಸಮಎನ್ನುವ ಆನಂದಾತಿರೇಕದ ಅರಿವು ಮನುಷ್ಯರ ನಡುವೆ ಇರುವ ಭೇದ ಭಾವನೆಯನ್ನು ಮುರಿಯುತ್ತದೆ.

ನಿಜವಾದ ಧರ್ಮದಲ್ಲಿ ಇಡೀ ಮಾನವ ಜನಾಂಗವೇ ಒಂದು ಎಂಬ ಸಾಕ್ಷಾತ್ಕಾರದ ಕಲ್ಪನೆಯಿದೆ, ಆಧ್ಯಾತ್ಮಿಕ ಸಮಾಜವನ್ನು ಕಟ್ಟಲು ಧರ್ಮ ನೆರವಾಗುತ್ತದೆ. ರಾಷ್ಟ್ರಖಂಡ, ದೇಶ, ಎಂದು ಬಿಡುಸಿಲ್ಲಲಾರದು ಎಲ್ಲ ಮಾನವ ಕೋಟಿಯೂ ಇದರಲ್ಲಿ ಸೇರಬೇಕು.

ಈ ಮಾನವ ಪ್ರೇಮದಿಂದ ನಾವು ಇತರರ ನಂಬಿಕೆಗಳನ್ನು ಗೌರವಿಸಬೇಕು. ಈ ದೃಷ್ಟಿಯಲ್ಲಿ ಪೌರ್ವಾತ್ಯ ಮತಗಳು ಪಾಶ್ಚಾತ್ಯ ಮತಗಳಿಗಿಂತ ಉತ್ತಮ ವಾದುದಾಗಿವೆ. ಉಳಿದವರ ಮೇಲೆ ನಮ್ಮ ಭಾವನೆಗಳನ್ನೂ ನೀತಿಯ ನೆಲೆಗಳನ್ನು ಹೇರ ಬೇಕೆಂದು ಸಾಮಾನ್ಯ ಬಯಕೆ, ಈ ಮನೋಧರ್ಮಕ್ಕೆ ನಮ್ಮೆಲ್ಲರ ಸಹಾನುಭೂತಿಇದೆ, ಪ್ರಾಮಾಣಿಕ ಕಲ್ಪನೆಯನ್ನು ತತ್ರಾಪಿ ಆ ಕಲ್ಪನೆ ಆಧ್ಯಾತ್ಮಿಕ ಪ್ರವೃತ್ತಿಗಳಿಗೆ ಸಂಬಂಧಿಸಿದಾಗ ನಾವು ತಿರಸ್ಕಾರ ಬುದ್ಧಿಯಿಂದ ಕಾಣುವುದಕ್ಕಿಂತ ಹೇಯವಾದುದು ಮತ್ತೊಂದಿಲ್ಲ, ನಾವು ಶಬ್ದಗಳಿಗೆ ದಾಸರಲ್ಲ.

ಎಲ್ಲ ದೇವಸ್ಥಾನ, ಮಸೀದಿ, ಚರ್ಚುಗಳಲ್ಲಿ ಸದ್ಭಾವನೆಯುಳ್ಳ ಎಲ್ಲ ಜನರಿಗೂ ಆಹ್ವಾನವಿರುವ ಭಗವಂತನಲ್ಲಿ ಶ್ರದ್ಧೆ ಮತ್ತು ಮಾನವನಲ್ಲಿ ಪ್ರೇಮ ಇವೇ ಪರಸ್ಪರ ಮೈತ್ರಿಗೆ, ಸೇವೆಗೆ ಅಗತ್ಯಗುಣಗಳೆನ್ನುವ, ಇಡೀ ಮಾನವ ಕೋಟಿಯೇ ಬರಿದು ಹೆಸರಿಲ್ಲದಿದ್ದರೂ ಒಂದೇ ಚೈತನ್ಯದಿಂದ ಬದ್ಧವಾದಕಾಲ ಬಂದೀತು.

ಮನುಷ್ಯ ಎಂದೂ ಪ್ರೀತಿಸಬೇಕು. ತನಗೆ ದುಃಖವನ್ನುಂಟುಮಾಡಿದವನ ವಿಚಾರದಲ್ಲಿ

ೂಡ ನಿಷ್ಠುರನಾಗಿರಬಾರದು, ನಾವು ಪ್ರೀತಿಸುವಾಗ ಎಷ್ಟು ಪತಿತವಾದರೂ ಸಹ ರನ್ನು ಅವಹೇಳನ ಮಾಡುವ ಹಕ್ಕು ನಮಗಿಲ್ಲ. ನಾವು ಪ್ರೀತಿಸಿದರೆ ಅವರು ಯಾವುದನ್ನು ಾಡಿದರೂ ಅದು ಪ್ರಿಯವೇ, ಬಡವರನ್ನು, ದುರ್ದೈವಿಗಳನ್ನು ತಮ್ಮವರೆಂದು ಾಣದವರು, ತಪ್ಪಿತಸ್ಥರನ್ನು ನಿಂದಿಸುವರು, ದುರಾಚಾರಿಗಳನ್ನು ಕಡೆಗಣ್ಣಿನಿಂದ ಡು ಅವರ ಅಪರಾಧಗಳನ್ನು ವ್ಯಂಗವಾಗಿ ನೋಡುವವರು ನಿಜವಾಗಿ ಪ್ರೀತಿಸುವವರಲ್ಲ. ಗಲೇ ಪೆಟ್ಟುತಿಂದವರನ್ನು ಮತ್ತೆ ಹೊಡೆದು, ಬಿದ್ದವರನ್ನು ಮತ್ತೆ ತುಳಿದರೆ ಅದು ಾಷಂಡಿಗಳ ಧರ್ಮ. ಸಭ್ಯರಾದವರು ನಮ್ಮಲ್ಲಿ ಅತ್ಯಂತ ಹೀನರೆನಿಸಿ ಕೊಂಡವರ ವಿಚಾರದಲ್ಲೂ ಸಹನೆ ತೋರಿಸುತ್ತಾರೆ. ನಮ್ಮ ತಪ್ಪುಗಳನ್ನೆಲ್ಲಾ ಮನ್ನಿಸುವಷ್ಟು ನಮ್ಮನ್ನು ಗೌರವಿಸುತ್ತಾರೆ. ನಮ್ಮ ತಪ್ಪನ್ನು ಮುಚ್ಚಲು ನೂರಾರು ಕಾರಣಗಳನ್ನು ಕಲ್ಪಿಸುತ್ತಾರೆ. ಇದು ಕರ್ತವ್ಯ ದೃಷ್ಟಿಯಿಂದಲ್ಲ, ಅವರ ಸ್ವಾಭಾವಿಕ ಪ್ರೇಮದ ಫಲ ಮ್ಮ ಸಣ್ಣತನವನ್ನಾಗಲಿ ತಪ್ಪುಗಳನ್ನಾಗಲಿ ನೆನಪಿನಲ್ಲಿಟ್ಟುಕೊಳ್ಳದೆ ತಮ್ಮ ಪ್ರೀತಿಯನ್ನು ಮಗೆ ಧಾರಾಳವಾಗಿ ಕೊಟ್ಟು ನಮ್ಮಿಂದ ಏನನ್ನೂ ಪ್ರತಿಯಾಗಿ ನಿರೀಕ್ಷಿಸದೆ ಇರುತ್ತಾರೆ.

ಎಚ್ಚರ ತಪ್ಪಿದ ಒಂದು ಕೆಲಸ ಒಮ್ಮೊಮ್ಮೆ ಬಾಳನ್ನೇ ಹಾಳು ಮಾಡಬಲ್ಲದು. ಹುಚ್ಚುಕೆಲಸ ಒಮ್ಮೊಮ್ಮೆ ಮನೆತನವನ್ನು ಅವಮಾನಕ್ಕೆ ಗುರಿಮಾಡಬಲ್ಲದು ಎಂದು ಅವರು ಬಲ್ಲರು, ಹೀಗೆ ಉದಾರ ಚರಿತರು ದೊರೆಯದಿದ್ದರೆ ಜರ್ಜರಿತ ಜೀವಿಗಳು ಸೊರಗಿ ಸಾಯಬೇಕಷ್ಟೆ. ಪ್ರೀತಿಯ ವಿಚಾರದಲ್ಲಿ ಯಾರುಯಾರು ಏನೇನು ಹೇಳಿದ್ದಾರೊ ಎಲ್ಲವನ್ನೂ ಬಾಯಿಪಾಠಮಾಡಿ ಹೇಳುವುದು ಸುಲಭ, ನಮ್ಮ ಸಹಜೀವಿಗಳನ್ನು ಪ್ರೀತಿ-ಸುವುದು ಅಷ್ಟುಸುಲಭವಲ್ಲ, ಅವರೊಂದಿಗೆ ಸಮಾಧಾನಕರವಾದ ಸಂಬಂಧಗಳನ್ನು ಇಟ್ಟುಕೊಳ್ಳುವುದು ಕಷ್ಟ. ಪ್ರೀತಿಗೆ ಬೇಕಾದುದು ಕಲ್ಪನೆಯ ಅನ್ವೀಕ್ಷಕ ದೃಷ್ಟಿ, ಕಲ್ಪ-ನಾಶಕ್ತಿ ಇಲ್ಲದಿದ್ದವರಿಗೆ ಅದನ್ನು ಕೊಡುವುದು ಸಾಧ್ಯವಿಲ್ಲ.

ಆತ್ಮದ ಏಕಾಂತದಲ್ಲಿ ನಾವು ಬೆಳೆಸಿಕೊಳ್ಳಬೇಕಾದ ಕಾಲ್ಪನಿಕ ಅಂತಃಕರಣ ಪ್ರೀತಿ ತಾನೇ ತಪಿಸಿ, ಪರರ ದುಃಖಕ್ಕಾಗಿ ತಪಿಸುವ ಅಂತಃಕರಣ ಅದು. ಈ ಅಂತಃಕರಣದ ಪ್ರಕಾಶದಿಂದ ನಾವು ರಿಕ್ತರಾಗಿದ್ದರೆ ನಾವು ಮನುಷ್ಯರೆ ಅಲ್ಲ, ನಿಜವಾದ ಪ್ರೀತಿಯು ಇಡೀ ವಿಶ್ವವನ್ನೇ ತನ್ನ ಊರೆಂದು ಇಡೀಮಾನವ ಜನಾಂಗವೇ ತನ್ನ ಜನರೆಂದು ಬಗೆ-ಯುತ್ತದೆ. ಇಂಥ ಪ್ರೀತಿ ದೂರದ ಆದರ್ಶ, ವರ್ಣೀಯನನ್ನು ಅವನ ಬಂಧನದಿಂದ ಬಿಡಿಸಿ ಸ್ವತಂತ್ರನನ್ನಾಗಿ ಮಾಡುವಷ್ಟು ನಾವು ಅವನನ್ನು ನೆರೆಯವನಂತೆ ಪ್ರೀತಿಸು-ವುದಿಲ್ಲ. ನಮ್ಮ ಮಗಳು ಆಪತ್ತಿಗೆ ಸಿಕ್ಕಂತೆಯೆ ಬಡವನ ಮಗಳು ಆಪತ್ತಿಗೆ ಸಿಕ್ಕರೆ ಅಷ್ಟು ನಾವು ಪರಿತಪಿಸುವುದಿಲ್ಲ, ಪ್ರೀತಿಎಂದರೆ ನಮ್ಮ ಆತ್ಮವನ್ನೇ ಬಿಟ್ಟುಕೊಡುವುದು ನಮ್ಮ ಸ್ಥಾನಮಾನಗಳನ್ನು ಬಿಡುವುದು, ಬೇರೆಯವನ ಕಣ್ಣಿಂದ ನೋಡುವುದು,ಅವನ ಹೃದಯದಿಂದ ಅನುಭವಿಸಿ, ಅವನ ಮನಸ್ಸಿನಿಂದ ಅರಿಯುವುದು.

ಸಿದ್ಧಗಂಗಾ

ಮನುಷ್ಯ ಕೇವಲ ಚಿಂತನಾ ಜೀವಿ ಎಂದು ಬಗೆದರೆ ಪ್ರಯೋಜನವಿಲ್ಲ. ಅವನ ಬುದ್ಧಿಶಕ್ತಿಯೇ ಅವನ ಸರ್ವಸ್ವವಲ್ಲ, ಬುದ್ಧಿಯಿಂದ ಮೂಡಿ ಬಂದ ಭಾವನೆ ಮನುಷ್ಯನ ಜೀವನದ ಒಳಪದರಗಳಲ್ಲಿ ಹೊಕ್ಕು ಅವನ ಜಾಗ್ರತ, ಮತ್ತು ಸುಪ್ತ ಚೇತನಗಳನ್ನು ಆಡಿಸಬೇಕು, ಮಾತು ಭಾವನೆ ಜೀವಂತವಾಗಬೇಕು.

ಸೃಷ್ಟಿ ಎನ್ನುವುದು ಮನುಷ್ಯ ತನ್ನ ವಿಚಿತ್ರ ಗೂಢ ಆತ್ಮನನ್ನೂ, ಅದರ ನಿಜವಾದ ಪ್ರವೃತ್ತಿಯನ್ನು ಅರಿಯಲು ಮಾಡುವ ಒಂದೇ ಪ್ರಯತ್ನ ಅದುವೆ ಮಾನವ ಪ್ರೇಮ.



## ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ದಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್. ಎಸ್. ನರಸಿಂಹ ಜೀಯರ್
ಶ್ರೀ ಬಸವೇಶ್ವರ ಆಂಗ್ಲಶಾಲೆ, ತುಮಕೂರು - 2

ಡಾ|| ಎಲಿಜಬೆತ್ ಕುಬ್ಲರ್ ರಾಸ್ ಎಂಬುವರು ಮಾನವ ಜೀವನ ಅಂತ್ಯವಾದ ಮೇಲೆ ಮತ್ತೆ ಜೀವನವಿದೆ ಎಂದಿದ್ದಾರೆ. ಅವರ ವಾಣಿಯಲ್ಲಿಯೇ ಹೇಳುವುದಾದರೆ " It is not a matter of belief or opinion, I know beyond a shadow of doubt that there is life after death" ಎಂದಿದ್ದಾರೆ. ಇಷ್ಟೊಂದು ಖಚಿತವಾಗಿ ಅವರು ಹೇಳಬೇಕಾದರೆ ಅದರಿಗೆ ಇದರ ಸತ್ಯ ಹೊಳೆದಿರಬೇಕು. ನಮ್ಮ ದೇಶದ ಆಧ್ಯಾತ್ಮ ಜೀವಿಗಳೆಲ್ಲರೂ ಇದೇ ಅಭಿಪ್ರಾಯ ಹೊಂದಿದ್ದಾರೆ. ವೇದ, ಶೃತಿ ಹಾಗೂ ಸ್ಮೃತಿಗಳೂ ಇದನ್ನೇ ಸಾರಿವೆ. ಇದಕ್ಕೇನಾದರೂ ವೈಜ್ಞಾನಿಕ ಆಧಾರ ಇದೆಯೆ ? ಈ ವಿಚಾರದಲ್ಲಿ ಸಂಶೋಧನೆ ನಡೆದಿದೆಯೆ ? ಇದಕ್ಕೆ ಸಬಂಧಿಸಿದಂತೆ ನಡೆದಿರುವ ಇತ್ತೀಚಿನ ಘಟನೆಯನ್ನು ಪರಿಶೀಲಿಸೋಣ.

ಈ ಘಟನೆಯು ಕಾಲ್ಪನಿಕವಲ್ಲ. ಇದರ ವಿವರಗಳು 1975ನೆಯು ಇಸವಿ ಮೇ ತಿಂಗಳಿನ "ರೀಡರ್ಸ್ ಡೈಜೆಸ್ಟ್" ನಲ್ಲಿ ಪ್ರಕಟವಾಗಿದೆ. ಈ ಪತ್ರಿಕೆಯು ಅಮೇರಿಕಾದಿಂದ ಪ್ರಕಟವಾಗುವ ಮಾಸಪತ್ರಿಕೆ. ಸಹಸ್ರಾರು ಜನರು ತಮ್ಮ ಕಣ್ಣಿನಿಂದ ನೋಡಿ, ಉಪಕೃತರಾದ ಘಟನೆ ಇದು. ಬ್ರೆಜಿಲ್ ದೇಶದ ಒಬ್ಬ ಬಡ ರೈತ. ಈತ ಸಾಮಾನ್ಯ ಹಳ್ಳಿಗ. ಇವನೊಬ್ಬ ಮಹಾ ಸರ್ಜನ್ ಆಗಿ ಪರಿವರ್ತನೆಗೊಂಡ. ಈತನು ಯಾವ ವೈದ್ಯಕೀಯವ್ಯಾಸಂಗ ಮಾಡಿದವನಲ್ಲ. ಯಾವತರಬೇತಿಯನ್ನು ಪಡೆದವನಲ್ಲ. ಆಧುನಿಕ ಉಪಕರಣಗಳ ಸಹಾಯವಿಲ್ಲದೆ ಕೇವಲ ಅಡಿಗೆಯಮನೆಯ ಚಾಕುವಿನಿಂದಲೇ ಅಸಂಖ್ಯ ಆಪರೇಷನ್ ಮಾಡಿದ. ಇವನಿಂದ ಅನೇಕ ಕುರುಡರು ಕಣ್ಣು ಪಡೆದರು, ಕುಂಟರು ಕಾಲುಗಳನ್ನು ಪಡೆದರು. ದೇಹದೊಳಗಿನ ಗೆಡ್ಡೆಗಳನ್ನೂ, ಗ್ರಂಥಿಗಳನ್ನು ಕ್ಷಣಾರ್ಧದಲ್ಲಿ ಕೊಯ್ದು ಹಾಕುತ್ತಿದ್ದ. ರಿಯೋಡಿ ಜನ್ಯೆರೋ ಪ್ರದೇಶದ ಡಾಕ್ಟರರೂ ಪೌಲೋ ವಿಶ್ವವಿದ್ಯಾಲಯದ ಮತ್ತು ಮೆಡಿಕಲ್ ಆಕ್ಯಾಡೆಮಿಯ ವೈದ್ಯರುಗಳೂ ಅವನ ಶಸ್ತ್ರ ಚಿಕಿತ್ಸಾ ವಿಧಾನವನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ಮೂಕವಿಸ್ಮಿತರಾದರು. ಹೆಚ್ಚು ಓದು ಬರಹ ಬಾರದ ಈತ ಸರಸರನೆ ಔಷಧ ಸೂಚಿಸುವ ಚೀಟಿಗಳನ್ನೂ ಬರೆದು ಕೊಡುತ್ತಿದ್ದ. ಅವನು ಮಾಡಿದ ಎಲ್ಲಾ ಶಸ್ತ್ರಚಿಕಿತ್ಸೆಗಳೂ ಯಶಸ್ವಿಯಾದುದನ್ನು ಕಂಡು ವೈದ್ಯರ ತಂಡದವರು ಆಶ್ಚರ್ಯ ಚಕಿತರಾದರು. ಅಮೆರಿಕಾದ ಪ್ರಸಿದ್ಧ ಡಾ|| ಪುಹಿಚ್ ಎಂಬುವರು ಸ್ವತಃ ತಾವೇ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡುದೇ ಅಲ್ಲದೆ ಫೋಟೋ

ಗಳನ್ನು ತೆಗೆದಿರಿಸಿಕೊಂಡು ಅವನ ಸಾಮಾರ್ಥ್ಯಕ್ಕೆ ಸಾಕ್ಷಿಯಾದರು. ಅವನು ಮಾಡಿದ ನೂರಾರು ಶಸ್ತ್ರ ಚಿಕಿತ್ಸೆಗಳು ಅವರಿಗೆ ಒಗಟೇ ಆಗಿತ್ತು.

ಆತನ ಹೆಸರು ಜಿ. ಅರ್ರಿಗೋ. ಬಡ ಹಳ್ಳಿಗನಾದರೂ ಇತರರ ದುಃಖ ಸಂಕಟಗಳಿಗೆ ಮರುಗುವ ಮನೋಭಾವವುಳ್ಳವನು. ಇದೊಂದೇ ಅವನ ಸೇವೆಗೆ ಪ್ರೇರಕಶಕ್ತಿ. ಈತನ ಚಿಕಿತ್ಸಾಲಯದ ಹೆಸರು "ನಜರೇತಿನ ಯೇಸು ಸ್ವಾಮಿಯ ಆಧ್ಯಾತ್ಮಿಕ ಕೇಂದ್ರ" ಎಂದು. 1955 ನೆಯ ಇಸವಿಯಿಂದ 1971 ನೆಯ ಇಸವಿಯವರೆಗೆ ಈ ಶಸ್ತ್ರಚಿಕಿತ್ಸೆ ಕಾಯಕ ನಡೆಸುತ್ತಿದ್ದ. ಪ್ರತಿದಿನ ಬೆಳಿಗ್ಗೆ 6 ಗಂಟೆಗೆ ತನ್ನ ಆಧ್ಯಾತ್ಮಿಕ ಕೇಂದ್ರದಲ್ಲಿ ಹಾಜರಾಗುತ್ತಿದ್ದ. ಆತ ಪ್ರಾರ್ಥನೆ ಸಲ್ಲಿಸಿ ಅಣಿಯಾಗುವಾಗ ಅವನು ಹಳ್ಳಿಯ ರೈತನಾಗದೆ ಪ್ರಸಿದ್ದ ತಜ್ಞ ಡಾಕ್ಟರಾಗುತ್ತಿದ್ದ ಜರ್ಮನ್ ಭಾಷೆಯನ್ನು ಸ್ವಲ್ಪವೂ ಅರಿಯದ ಈತ ಜರ್ಮನ್ ಮಿಶ್ರಿತ ಪೋರ್ಚು ಗೀಸ್ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದ. ಸರಕಾರದ ಅನುಮತಿ ಇಲ್ಲದೆ ಔಷಧಿ ನೀಡುವುದನ್ನು, ಶಸ್ತ್ರ ಚಿಕಿತ್ಸೆ ಮಾಡುವುದನ್ನು ಕ್ರೈಸ್ತ ಸಂಪ್ರ ದಾಯದ ಧರ್ಮಗುರುಗಳು ವಿರೋಧಿಸಿ ಅವನನ್ನು ಜೈಲಿಗೆ ಹಾಕಿಸಿದರು. ಇತನಲ್ಲಿ ಉದ್ಯೋಗಕ್ಕೆ ಬೇಕಾದ ಅನುಮತಿಯೊಂದಿರಲಿಲ್ಲವೇ ವಿನಹ ಮತ್ತಾವ ದೋಷವೂ ಇವನಲ್ಲಿ ಕಂಡುಬರಲಿಲ್ಲ. ಎಲ್ಲಾ ಚಿಕಿತ್ಸೆಗಳೂ ಫಲಕಾರಿಯಾಗಿದ್ದವು. ಇವನು ಜೈಲಿನಲ್ಲಿದ್ದಾಗ ಇವನಿಂದ ಉಪಕಾರ ಹೊಂದಿದ ಸಹಸ್ರಾರು ಜನರು ಎಂಟು ಲಕ್ಷದ ನಲವತ್ತು ಸಾವಿರ ಡಾಲರ್ ಸಂಗ್ರಹಿಸಿ ಅವನಿಗೆ ಕಳುಹಿಸಿದರು. ಅದನ್ನು ತಿರಸ್ಕರಿಸಿದ. ಏಕೆಂದರೆ ಯಾವ ಚಿಕಿತ್ಸೆಗೂ ಇವನು ಹಣ ಪಡೆಯುತ್ತಿರಲಿಲ್ಲ.

ಈತನು 1971 ನೆಯ ಜನವರಿ 11 ನೇ ದಿನಾಂಕ ರಸ್ತೆಯ ಅಪಘಾತ ಒಂದರಲ್ಲಿ ಅಸುನೀಗಿದ. ಈತನ ಅಂತಿಮ ಯಾತ್ರೆಯಲ್ಲಿ ಸಹಸ್ರ ಜನಪಾಲ್ಗೊಂಡು ಇವನಿಗೆ ಶ್ರದ್ಧಾಂಜಲಿ ಅರ್ಪಿಸಿದರು

ಈ ಅದ್ಭುತ ಶಕ್ತಿಯ ರಹಸ್ಯವೇನು ? ಎಂಬುದಾಗಿ ಅವನನ್ನು ಕೇಳಿದಾಗ ಅವನ ಉತ್ತರ ಈ ರೀತಿ ಇತ್ತು. "ರಾತ್ರಿ ಹೊತ್ತು ವೈದ್ಯಕೀಯ ಉಡುಪನ್ನು ಧರಿಸಿದ್ಧ ವ್ಯಕ್ತಿಯೊಬ್ಬನು ಆಗಾಗ ನನಗೆ ಕಾಣಿಸಿಕೊಳ್ಳುತ್ತಿದ್ದ." ಆತ ಇತರ ಕೆಲವು ತಜ್ಞ ಡಾಕ್ಟರ್‌ರೊಂದಿಗೆ ಚರ್ಚಿಸುತ್ತಾ ಅಸಾಧ್ಯವೆಂದು ತೋರಿದ ರೋಗ-ಗಳನ್ನು ಗುಣಪಡಿಸಲು ಶಸ್ತ್ರ ಚಿಕಿತ್ಸೆಗೆ ಸಜ್ಜಾಗುತ್ತಿದ್ದ. ಕೊನೆಗೆ ಆ ಡಾಕ್ಟರ್ ತಾನು ಯಾರೆಂಬುದನ್ನೂ ತಿಳಿಸಿದ.— "ನನ್ನ ಹೆಸರು ಡಾ|| ಫ್ರಿಟ್ಸ್ ಎಂದು ಎರಡನೆ ಮಹಾಯುದ್ದದ ಸಮಯ, ಸರ್ಜನ್ ಆಗಿ ಸೇವೆ ಸಲ್ಲಿಸುತ್ತಿರುವಾಗಲೇ ಮಡಿದ ನನಗೆ ಸಂಕಟಗ್ರಸ್ಥರಾದ ರೋಗಿಗಳ ಸೇವೆ ಮಾಡಬೇಕೆಂಬ ತೀವ್ರ ಹಂಬಲವಿದೆ. ನನಗೆ ದೇಹವಿಲ್ಲದಿದ್ದರೂ ವ್ಯಕ್ತಿತ್ವ, ಸ್ಮೃತಿ, ದಕ್ಷತೆಗಳನ್ನು ನಾನು

ಕಳೆದುಕೊಂಡಿಲ್ಲ. ಹಾಗಾಗಿ ನಾನು ನಿನ್ನ ದೇಹದ ಮೂಲಕ ರೋಗಿಗಳಿಗೆ ಶಸ್ತ್ರ ಚಿಕಿತ್ಸೆ ಮತ್ತು ಔಷಧ ಸೇವನೆಗೆ ನಿರ್ದೇಶನ ನೀಡುವೆ"— ಎಂಬುದಾಗಿ ತಿಳಿಸಿ ತಾನುಯಾರೆಂಬುದನ್ನ ತನ್ನ ಉದ್ದೇಶವೇನೆಂಬುದನ್ನೂ ಪ್ರಕಟಿಸಿದ" ಎಂಬುದಾಗಿ ಆರ್ಹಿಗೊ ತಿಳಿಸಿದ. ಡಾ|| ಫ್ರಿಟ್ಸ್‌ನ ವ್ಯಕ್ತಿತ್ವ ಈ ಆರ್ಹಿಗೋನಲ್ಲಿ ಆವಾಹಿತನಾದಾಗ ತಾನು ಯಾರು ಏನು ಮಾಡುತ್ತಿದ್ದೇನೆಂಬ ಅರಿವು ಅವನಿಗಿರುತ್ತಿರಲಿಲ್ಲ. ನಡೆ, ನುಡಿ, ಆಚಾರ ಹಾಗೂ ವಿಚಾರಗಳಲ್ಲೂ ಪೂರ್ಣ ರೀತಿಯ ಬದಲಾವಣೆ ಆರ್ಹಿಗೋನಲ್ಲಿ ಕಂಡು ಬರುತ್ತಿತ್ತು.

ಈ ಘಟನೆ ಆಕಸ್ಮಿಕ ಘಟನೆ ಎಂದು ಯಾರು ತಳ್ಳಿಹಾಕುವಂತಿಲ್ಲ. ಅನೇಕ ವೈದ್ಯಕೀಯ ತಂಡದವರನ್ನೆ ಬೆರಗುಗೊಳಿಸಿದ ಜೀವಂತ ಒಗಟು. ಇಂತಹ ಅನೇಕ ಘಟನೆಗಳು ಆಗಾಗ್ಗೆ ವಿಶ್ವದ ಅನೇಕ ಕಡೆ ನಡೆಯುತ್ತಲೇ ಇವೆ. ಇವೆಲ್ಲ ಆಕಸ್ಮಿಕ ಘಟನೆಗಳಲ್ಲ. ಇವುಗಳನ್ನೆಲ್ಲಾ ಪರಿಶೀಲಿಸಿಯೇ ಡಾ|| ಎ. ಕೆ. ದಾಸ್‌ರವರು ಖಚಿತವಾಗಿ "ಜೀವನ ಅಂತ್ಯವಾದ ಮೇಲೆ ಮತ್ತೆ ಜೀವನವಿದೆ" ಎಂದು ತಿಳಿಸಿದ್ದಾರೆ. ವಿಜ್ಞಾನದಲ್ಲಿ ಇಂಹ ಘಟನೆಗಳಿಗೆ ಸದ್ಯಕ್ಕೆ ಉತ್ತರವಿಲ್ಲದಿದ್ದರೂ ಆಧ್ಯಾತ್ಮದಲ್ಲಿ ಉತ್ತರವಿದೆ.

ಇಂತಹ ವಿಚಾರಗೆಳ ಬಗ್ಗೆ ವಿಜ್ಞಾನ ಇನ್ನೂ ಹೆಚ್ಚು ಹೆಚ್ಚು ಅರಿಯಬೇಕಾಗಿದೆ ಎಂದು ಜೆ. ಜಿ. ಫುಲ್ಲರ್‌ರವರು ಈ ರೀತಿ ಹೇಳಿದ್ದಾರೆ. "Science has much more to learn specially in area of Para-normal which has not been scratehed yet"

ಆದ್ದರಿಂದ ವಿಜ್ಞಾನವು ಇನ್ನೂ ಶೋಧನೆ ಮಾಡದೆ ಇರುವ ಅನೇಕ ವಿಚಾರಗಳು ವಿಶ್ವದಲ್ಲಿ ಅಡಗಿವೆ ಎಂಬುದನ್ನು ನಾವೆಲ್ಲರೂ ಅರಿಯಬೇಕು. ಆಧ್ಯಾತ್ಮ ವಿಚಾರಗಳಲ್ಲಿ ಇಂತಹ ಕೆಲವು ಸಮಸ್ಯೆಗಳಿಗೆ ಉತ್ತರವನ್ನು ಕಾಣಬಹುದಾಗಿದೆ. ಸರ್ವರೂ ಸರ್ವ ವಿಷಯಗಳಲ್ಲಿಯೂ ಸರ್ವಜ್ಞರಾಗಿರುವುದು ಅಸಾಧ್ಯವೇ ಸರಿ. ಪ್ರಯುಕ್ತ ನಮಗೆ ತಿಳಿಯದ ವಿಚಾರಗಳಲ್ಲಿ ಅನಾವಶ್ಯಕ ಟೀಕೆ ಮಾಡದೆ ನಾವೆಲ್ಲರೂ ತತ್ವಜ್ಞಾನಿಯಾದ ಕನ್‌ಫ್ಯೂಶಿಯಸ್ ಹೇಳಿರುವ ಬುದ್ಧಿಮಾತನ್ನು ಅರಿತು ಅದರಂತೆ ನಡೆಯುವುದು ಒಳ್ಳೆಯ ತನವಲ್ಲವೇ ? ಅವನು ಈ ರೀತಿ ಹೇಳಿದ್ದಾನೆ.

"Admit that you do not know what you do not Know and that is Knowledge"

— Confusius.

ಕೃತಜ್ಞತೆ :- ಶ್ರೀ ಜಗದಾತ್ಮನಂದರ "ಬದುಕಲು ಕಲಿಯಿರಿ"

# ಸಿದ್ಧಗಂಗಾ ಮಠದ ಪ್ರತಿಭೆ

ಗೋವಿಂದರಾಜು, ಟಿ. ಮಾಕೇನಹಳ್ಳಿ,
ನರಸೀಪುರ ಅಂಚೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ.

ಜೀವನ ಜ್ಯೋತಿಯ ಬಾಳಲಿ ಬೆಳಗುತ
ನಮಿಸಿರಿ ಶಿವನ ಪಾದಕ್ಕೆ
ಒಮ್ಮನಸಿಂದಲಿ ಸರ್ವರು ಬಾಳುತ
ಸಿದ್ಧಗಂಗೆಯ ಕೀರುತಿ ಚೆಲ್ಲಿರಿ ಲೋಕಕ್ಕೆ
ಅರಳಿದ ಹೂವನು ಮಾಲೆಯ ವರ್ಣದಿ
ಅರ್ಪಿಸಿ ಶಿವನ ಲಿಂಗಕ್ಕೆ
ಪ್ರಗತಿಯ ಪಥವನು ಪಾವನಗೊಳಿಸಲು
ಶಿವಧ್ಯಾನದಿ ಧಾವಿಸಿ ಮಾರ್ಗಕ್ಕೆ
ಸಕಲಾವತಾರದಿ ಲೋಕವ ರಕ್ಷಿಪ
ಶಿವನ ತೀರ್ಥವ ಸೇವಿಸಿ ದಾಹಕ್ಕೆ
ಶಿಕ್ಷಣ ದಾರಿಯು ಶಿವನೆಲೆಯಲ್ಲಿಯೆ
ಪ್ರಗತಿಯ ಹೆಚ್ಚಿಸಿ ನಿಲಯಕ್ಕೆ
ಸತ್ಯದಿ ಸ್ವಾಮಿಯ ನಿತ್ಯವು ಸ್ಮರಿಸುತ
ಮುಕ್ತಿಯ ಬಯಸಿರಿ ಜೀವಕ್ಕೆ
ಕೀರುತಿ ಮಾತಿಗೆ ಸ್ಫೂರುತಿಯಿಂದಲಿ
ಸತ್ಯದಿ ಎರಗಿರಿ ಶಿವಕುಮಾರ ಸ್ವಾಮಿಯ ಚರಣಕ್ಕೆ



# ವಿದ್ಯಾರ್ಥಿ ನಿಲಯ

ಟಿ. ಬಿ. ಚನ್ನಬಸಪ್ಪ, ಬಸವ ಪ್ರಸಾದ, ಶಂಖರ ಮಠ, ಕ್ರಾಸ್ ಕಿಲ್ಲೆ, ಮೈಸೂರು.

## ಪ್ರಬಂಧ

ಮಾನವನಿಗೆ ಮಾತ್ರ ನಿಲಯವೆ? ಮೃಗ ಪಕ್ಷಿಗಳಿಗೂ ಬೇಕು. ಬಹಳ ಆಳವಾಗಿ ಆಲೋಚಿಸಿದರೆ ಸಸ್ಯಗಳಿಗೂ ಬೇಕು. ಹುಲಿ, ಸಿಂಹ, ಚಿರತೆಗಳಿಗೆ ಕಾಡುಗಳಲ್ಲಿ ಸಾಮಾನ್ಯವಾಗಿ ಗುಹೆಗಳು – ಆನೆಗಳಿಗೆ ಬಿದುರಿನ ನೀರಿವ ಆಶ್ರಯದ ತಾಣಗಳು ಇನ್ನಿತರ ಮೃಗಗಳಿಗೆ ಬಂಡೆಯು ಮತ್ತು ಕೊರಚಿನ ಪ್ರದೇಶಗಳು – ಪಕ್ಷಿಗಳಿಗೆ ಗೂಡುಗಳು – ಸಾಕು ಪ್ರಾಣಿಗಳಿಗೆ ಮೃಗಾಲಯ ಮತ್ತು ಒಡೆಯನ ಮನೆ ಮೊದಲಾದುವುಗಳು ನಿಲಯಗಳು ಎಂದು ಹೇಳಬಹುದು!

ಮಾನವ ತನ್ನ ಬದುಕಿನ ಕಾಲವನ್ನು, ಕೌಮಾರ, ಬ್ರಹ್ಮಚಾರಿ, ಗೃಹಸ್ತ, ವಾನಪ್ರಸ್ತ, ಸನ್ಯಾಸಿಗಳಾಗಿ ವಿಭಾಗಿಸಿಕೊಂಡಿರುವನು ಕೌಮಾರ ಮಾತಾ ಪಿತೃಗಳ ಆರೈಕೆ, ಬ್ರಹ್ಮಚರ್ಯಾಶ್ರಮವೆಯು ವಿದ್ಯಾರ್ಥಿಯ ಅಶ್ರಮ.

ಈ ವಿಧ್ಯಾರ್ಥಿಯ ಆಶ್ರಮವೇ ಬಹಳ ಪ್ರಾಮುಖ್ಯ. ಮುಂದಿನ ಬದುಕಿಗೆ ತಳಹದಿಯು. ಆ ಕಾಲದ ಆತನ ನಿಲುವೇ ದಾರಿಯ ದೀಪ. ಇಲ್ಲಿ ಸಲ್ಲುವ ವಿದ್ಯಾರ್ಥಿಯು ಅಲ್ಲಿಯೂ ಅಂದರೆ ಮುಂದಿನ ಜೀವನದಲ್ಲಿಯೂ ಸಲ್ಲುತ್ತಾನೆ - ಮಾನವ ಅನ್ನಿಸಿಕೊಳ್ಳುವನು. ಸಲ್ಲದಿದ್ದರೆ ಮಾನವರೂ ದನ, ಪಶುಅನ್ನಿಸಿಕೊಳ್ಳುವನು "ವಿದ್ಯಾವಿಹೀನಂ ಪಶು" ಎಂಬುದಾಗಿ ಪ್ರಾಜ್ಞರು ಟಿಸ್ಸೆ ಒತ್ತಿದ್ದಾರೆ. ಇದು ಸತ್ಯ. ನಮ್ಮ ಈಗಿನ ಸ್ವತಂತ್ರ ಭರತ ಭೂಮಿಯಲ್ಲಿ ಸುಮಾರು 85/– ಕೋಟಿ ಜನರಿರುವರು. ನಾಗರೀಕ ದೇಶಗಳಲ್ಲಿ ಇದೂ ಕೂಡ ಒಂದಾಗಿದೆ.

"ವಿದ್ಯಾದತಿ, ವಿನಯಂ। ವಿನಯಂ, ಪಾತ್ರತಾಂ।
ಪಾತ್ರತಾಂ, ಧನ ಸಮುಚ್ಛವೈ॥

ನಮ್ಮ ಈಗಿನ 85 / ಕೋಟಿ ಅದರಲ್ಲಿ ಮೊದಲಾಗಿ ಬ್ರಹ್ಮಚರ್ಯಾಶ್ರವಿಗಳು (ವಿದ್ಯಾರ್ಥಿಗಳು) ತಿಳಿಯಲೇಬೇಕು. ಒಬ್ಬಾತನು ಸುಖವಾಗಿರುವುದನ್ನು ನೋಡಿ ಸಂತೋಷಪಡಬಹುದು. ಕೆಟ್ಟು ಬೀದಿ ಪಾಲು ಆಗುವುದನ್ನು ನೋಡಿ ಸಹಿಸಲಾಗುವುದಿಲ್ಲ

ಪಂಪ, ಜನ್ನ – ರನ್ನ ; ಹರಿಹರ – ರಾಘವಾಂಕ; ವಾಲ್ಮೀಕಿ ವ್ಯಾಸರು ಇವರೇ ಮೊದಲಾದವರುಗಳಿಗೆ ವಿದ್ಯಾರ್ಥಿನಿಲಯಗಳು ಯಾವುದಾಗಿದ್ದವು ? ಗುರುಕುಲಾಶ್ರ

ಮಗಳು – ಗುರುಗಳ ವಾಣಿ – ಒಳ್ಳೆಯ ಪರಿಸರ ಇವು ಅವರುಗಳ ಉನ್ನತಿಗೆ ಪೂರಕ ವಾಗಿದ್ದೆ ! ಆ ವಾತಾವರಣದಿಂದ ಗುರುಗಳ ಆಶೀರ್ವಾದವಂ ಪಡೆದು ಹೊರ ಬಂದವ ರಲ್ಲಿ, ಯೂರೂ ಕಳಪೆಯಾಗಲಿಲ್ಲ. ಅವರುಗಳ ನಿಲಯುಗಳು ಆವೇ ಆಗಿದ್ದವು. ಈಗ

ಸ್ವತಂತ್ರ ಭಾರತವಲ್ಲವೆ ? ಯಾವುದಕ್ಕೆ ಸ್ವಾತಂತ್ರ ? ಮುಖ್ಯವಾಗಿ ರಾಜಕೀಯಕ್ಕೆ. ವಿದ್ಯಾರ್ಥಿ ನಿಲಯುಗಳಿಗೆ ಸ್ವಾತಂತ್ರ ಹೇಗಿರಬೇಕು ? ಇದು ಬಹಳ ಜಟಿಲವಾದ ಪ್ರಶ್ನೆ !

ವಿದ್ಯಾರ್ಥಿ ನಿಲಯುಗಳೆ ಸರಸ್ವತಿಯ ನಿಲಯಗಳು. ಸದಾ ಅಲ್ಲಿ ಸರಸ್ವತಿ ಯನ್ನು ಆರಾಧಿಸಬೇಕು. ಆರಾಧಿಸುವ ನಿಲಯ ಯಾವ ವಾತಾವರಣದಲ್ಲಿರಬೇಕು ?

ಪ್ರಶಾಂತವಾದ ವಾತಾವರಣ. ಊರ ಜಂಜಡಕ್ಕೆ ದೂರ. ಸುತ್ತಲೂ ಪ್ರಕೃತಿಯ ದೃಶ್ಯ. ಸಾರ್ವಜನಿಕರ ವಾಹನಗಳ ಶಬ್ದ ಇರಬಾರದು. ಸಂಬಂಧಪಟ್ಟ ವಾಹನಗಳು ಮಾತ್ರ ಪ್ರವೇಶಕ್ಕೆ ರಹದಾರಿ. ಕಾರ್ಖಾನೆಗಳ ಗೊಂದಲ ಕನಸಾಗಿರ ಬೇಕು. ಸಮೀಪದಲ್ಲಿ ಹೋಟೆಲು, ಸಿನಿಮಾ ಮತ್ತು ಅಂಗಡಿಗಳು ಏಕೆ ?

ಸುಮಾರು 70 ವರ್ಷಗಳ ಹಿಂದೆ ನಾನು ಕಂಡ ದೃಶ್ಯ ನನ್ನ ಹೃದ ಯದಲ್ಲಿ ಹಚ್ಚಹಸರಾಗಿರುವುದು. ಸುಮಾರು ಸಾಯಂಕಾಲ 6½ ಗಂಟೆ ಸಮಯ ಇರಬಹುದು. ಈಗ ರಂಜಿಸುತ್ತಿರುವ ಮಹಾರಾಜ ಕಾಲೇಜಿನ ಸಮೀಪ ಹೋಗು ತ್ತಿದ್ದೆ. ಆ ಹಾಸ್ಟಲಿನ ಕಡೆ ತಿರುಗಿ ನೋಡಿದೆ. ಪ್ರತಿಯೊಂದು ರೂಮಿನಲ್ಲಿ ದೀಪ ವಿದ್ಯಾರ್ಥಿಯು ಕುರ್ಚಿಯಲ್ಲಿ ಕುಳಿತು ವ್ಯಾಸಂಗಿಯಾಗಿರುವನು. ನಿಶ್ಯಬ್ದ ಕೆಲ ರೂಮಿನಲ್ಲಿ 2 - 3 ಮಂದಿ ವ್ಯಾಸಂಗಿಗಳು ಅವರಪಾಠಗಳಲ್ಲಿ ಕಂಡು ಬರುತ್ತಿರುವ ತೊಡರುಗಳ ವಿಚಾರವಾಗಿ ವ್ಯಾಖ್ಯಾನಮಾಡುವ ವಾಡಿಕೆ ಮಾರನೆಯ ದಿನ ನಮ್ಮ ರೂಮಿನ ಸಹಪಾಠಿಯಿಂದ ತಿಳಿಯಬಂದಿತು.

ಮನೆಯಲ್ಲಿ ಮಾತಾ ಪಿತೃಗಳ ಮೇಲ್ವಿಚಾರಣೆ ನಿಲಯದ ಮೇಲ್ವಿಚಾರ ಕರು ಆ ಕಾಲಕ್ಕೆ ಮಾತಾ ಪಿತೃಗಳ ನಿಲುವನ್ನು ಪಡೆದು ಆ ಮಕ್ಕಳನ್ನು ನೋಡಿಕೊಳ್ಳುವರು. ಈ ಸಂಗತಿಗೆ ನಿದರ್ಶನ ಕೊಡುವುದಾದರೆ ಬೆಂಗಳೂರಿನಲ್ಲಿ ಕೈಲಾಸವಾಸಿಗಳಾದ ಶ್ರೀ ಮತ್ತು ಶ್ರೀಮತಿ ನೆಶ್ಯದ ಅಂಗಡಿ ಸಿದ್ಧರಾಮಣ್ಣ ದಂಪತಿಗಳು ತಮ್ಮ ಮನೆಯಲ್ಲಿಯೇ ವಿದ್ಯಾರ್ಥಿಗಳಿಗೆ ಪ್ರಸಾದವನ್ನು ನೀಡುತ್ತಿ ದುದುರ ಶ್ಲಾಘನೀಯ. ಕೈ|| ಗು|| ಮರಿಮಲ್ಲಪ್ಪನವರೂ ಕೂಡ ತಮ್ಮ ಸ್ವಂತ ಮನೆಯಲ್ಲಿಯೇ ವಿದ್ಯಾರ್ಥಿಗಳಿಗೆ ಊಟದ ಏರ್ಪಾಡು. ಹೀಗೆ ನೋಡುತ್ತಾ ಹೋದರೆ ಎಲೆಮರೆ ಕಾಯಿಯಂತೆ ಅನೇಕ ಮಹನೀಯರುಗಳು ನಾಡಿನ ನಾನಾ ಭಾಗಗಳಲ್ಲಿ ಕಂಡುಬರುವರು

ಈಗ ಕೆಲ ಮಠಗಳು ಈ ವಿಚಾರದಲ್ಲಿ ಬಾವುಟವನ್ನು ದಿಗಂತದ ಅತಿ ಎತ್ತರಕ್ಕೆ ಏರಿಸಿ ಇಡೀ ಭರತ ಖಂಡದವರು ದರುಶನಗೈಯುತ್ತಿರುವರು. ತುಮಕೂರು ಜಿಲ್ಲೆಯ ಸಿದ್ಧಗಂಗಾ ಬೆಟ್ಟದ ಪ್ರದೇಶವೆಲ್ಲವೂ ಶ್ರೀ ಶ್ರೀ ಶಿವಕುಮಾರ ಸ್ವಾಮಿಜೀಯುವರ ನಿಷ್ಠೆಯ ಶಕ್ತಿಯಿಂದ ವಿದ್ಯಾರ್ಥಿಗಳ ನಿಲಯಗಳಲ್ಲದೆ ವಿದ್ಯಾಪೀಠಗಳಾಗಿ ರಂಜಿಸುತ್ತಿರುವುದು. ಪೂರ್ವದ ಋಷ್ಯಾಶ್ರಮದ ದೃಶ್ಯವನ್ನು ತರುತ್ತಿರುವುವು. ಸಹಸ್ರಾರು ವಿದ್ಯಾರ್ಥಿಗಳು ಸರಸ್ವತಿಯನ್ನು ಆರಾಧಿಸುತ್ತಿರುವರು.

ಮೈಸೂರಿನಲ್ಲಿ ಒಂದಾನೊಂದು ಕಾಲದಲ್ಲಿ ಆನೆಗಳ ಲಾಯ, ಹಸುಗಳ ಕರುಹಟ್ಟಿಗಳು ಅಸನ - ವಸನ ಜ್ಞಾನಗಳಿಟಾಣ (ವಿದ್ಯಾರ್ಥಿ ನಿಲಯ) ಗಳಾಗಿ 50-60 ಸಹಸ್ರ ವಿದ್ಯಾರ್ಥಿಗಳು ಈ ಸೌಲಭ್ಯಗಳನ್ನು ಪಡೆಯುತ್ತಿರುವರು. ಶ್ರೀ ಸಿದ್ಧಿ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳು – ಮೈಸೂರಿನಲ್ಲಿ ಕೈ॥ ಶ್ರೀ ಡಾ॥ ಶಿವರಾತ್ರಿ ಸ್ವಾಮಿಜೀಯುವರು ಸುತ್ತೂರು ಮಠದಿಂದ ಮೈಸೂರಿಗೆದಯಮಾಡಿಸಿ ತಮ್ಮ ಲಿಂಗದ ಕರಡಿಗೆ, ಉಂಗುರಗಳನ್ನು ವಿಕ್ರಯಿಸಿ ಆರಂಭಿಸಿದ ವಿದ್ಯಾರ್ಥಿ ನಿಲಯ ಆಲದಮರದಂತೆ ಬಿಳಲಿನಂತೆ ಬೃಹದಾಕಾರವಾಗಿ ಬೆಳೆದು ತನ್ನದೇ ಆದ ವಿಶ್ವವಿದ್ಯಾಲಯ (University) ಆಗುವ ಸಂಭವವಿದೆ.

ಚಿತ್ರದುರ್ಗದ ಸಿರಿಗೆರೆ ನೋಡಿದರೆ ಸಾಕು ಅದು ವಿದ್ಯಾರ್ಥಿಗಳ ಸಿರಿಯ ಬೀಡಾಗಿದೆ. ಅದೊಂದು ಸರಸ್ವತಿಯ ದೇಗುಲಗಳ ಊರೇ ಆಗಿಹೋಗಿದೆ.

ಉತ್ತರ ಕರ್ನಾಟಕದ ಕಡೆ ನೋಡಿದರೆ ಮೂರು ಸಾವಿರಮಠದ ಶ್ರೀಗಳವರು, ಶ್ರೀ ಮೃತ್ಯುಂಜಯ ಸ್ವಾಮಿಯವರು, ಶಾರದೆಯ ಅವತಾರ ಪುರುಷರಾಗಿ ವಿದ್ಯಾರ್ಥಿಗಳಿಗೆ ಸಕಲ ಸೌಲಭ್ಯವನ್ನು ನೀಡುತ್ತಿರುವರು.

ಇವೆಲ್ಲವು ತಲೆ ಎತ್ತುವುದಕ್ಕೆ ಮೊದಲೇ ಚಿತ್ರದುರ್ಗದ ಶೂನ್ಯ ಸಿಂಹಾಸದ ಪರಂಪರೆಗೆ ಸೇರಿದ ಶ್ರೀ ಶ್ರೀ ಮುರಗಿಯವರ ವಿದ್ಯಾರ್ಥಿಗಳಾಗಿ ಈಗಲೂ ನಡೆಯುತ್ತಿರುವ ಶ್ರೀ ಮುರುಘರಾಜೇಂದ್ರ ಜಯದೇವ ಹಾಸ್ಟಲು- ಕಾಶೀಕ್ಷೇತ್ರದಲ್ಲಿರುವ ವಿದ್ಯಾರ್ಥಿಗಳ ಛತ್ರ ರಂಜಿಸುತ್ತಿರುವುವು.

ಕೊನೆಯಲ್ಲಿ ಮರೆತು ಹೋಗಿತ್ತು. ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿಗೆ ಇತರ ಮತದವರಿಗೆ ಅವಕಾಶವಿಲ್ಲವೆಂದು ಪ್ರಭುಗಳಿಂದ ಆಜ್ಞೆಯಾಗಲು, ಶ್ರೀ ಹೊಸಮಠದವರು ಜಾಗವನ್ನೂ, ಕೈ॥ ಗುರುಕಾರ್ ಅತ್ತಿಬಸಪ್ಪನವರು ಸಂಸ್ಕೃತ ಪಾಠಶಾಲೆಯ ಕಟ್ಟಡವನ್ನು ಕಟ್ಟಿಸಿದರು ವಿದ್ಯಾರ್ಥಿಗಳಿಗೋಸ್ಕರ. ಶತಮಾನವಾಯಿತು. ಈಗಲೂ ನಡೆದುಕೊಂಡು ಬರುತ್ತಿದೆ.!

## ಶ್ರೀ ಮದುದ್ದಾನೇಶ್ವರ ಶತಕವತ್ (ಮುಂದುವರೆದುದು)

ಲೋಕದೊಳು ಸಂಸಾರದಂಗಡಿ
ಯೇಕೆನಲು ಗುರುಶಿಶುವು ಗೋವ್ಗಳ
ನೇಕರತಿಥಿಗಳನ್ನು ಸೇವಿಸಿ ಭಾವಶುದ್ಧಿಯಲೀ ।
ಕಾಕುಮತಿಯಳಿದುಳಿದ ನಿಜಸುವಿ
ವೇಕನಿಧಿ ಸಂಗ್ರಹಿಸಲೆನುತರೆ
ಜೋಕೆಯರುಪಿದ ಜೀಯ ಉದ್ದಾನೇಶದಯವಾಗೋ ॥

ನೆರಳಿನತಿಥಿಗೆ ಕೊಡಲು ಮನೆಯಿದು
ಕರುಣೆಯಡಿಗೆಯ ಮಾಡಲತಿಥಿಗೆ
ಧರಣಿಧಾನ್ಯಕೆ ಪಶುವು ಹೈನಿಗೆ ತರಳನವಸರಕೇ ।
ಸಿರಿಯು ಪಾತ್ರದಿ ದ್ಯಾನಮಾಡಲು
ಹರನು ಕೊಟ್ಟಹನೆಂದು ತಿಳಿಸಿದ
ಶರಣ ಗಾತ್ರನೆ ಜೀಯ ಉದ್ದಾನೇಶದಯವಾಗೋ ॥

ಲೋಕದರಮನೆಯೊಳಗೆ ದೇವರ
ಚಾಕರರು ನಾವೆಮಗೆ ಪ್ರಕೃತಿಯ
ನೇಕಸಂಬಳಸಾಕು ಸಾಕೆನುವಂತೆ ದೊರೆಯುವುದೂ
ಸಾಕು ಸಾಲದ ರಾಜಜೀತಕ
ನೇಕ ಪರಿಮಿಗಿಲದದೊಳೇಜಗ
ಸಾಕಿ ಸಲಹುತ್ತಿರುವ ಉದ್ದಾನೇಶ ದಯವಾಗೋ ॥

ಐದು ಭೂತಗಳೇ ಖಜಾನೆಗ
ಳೈದುತತ್ವವೆ ಪಂಚಲೋಹದಿ
ದೈದು ಮುಖದೊಳು ಹೊತ್ತುತಂದದನಾರು ಕಾಣದೆಲೂ ।
ಹೊದ್ದು ಮಲಗಿರೆ ಬುದ್ಧಿಗೆಟ್ಟರೆ
ನಿದ್ದೆಯೊಳಗಿರಲೊದ್ದಿ ಮುದ್ದಿಸಿ
ಗುದ್ದಿಕೊಡುತಿಹ ಸಿದ್ಧ ಉದ್ದಾನೇಶದಯವಾಗೋ ॥

ರಾಜದುಷ್ಟರ ದಂಡಿಸುವಪರಿ
ಯೀಜಗದ ಬಹುವಿಷಯ ಚಪಲಗೆ
ರಾಜಭೋಗವ ನಿತ್ತು ಚಟಗಳು ಬಲಿತುಬೇರೂರೇ ।
ಮಾಜಿ ಸಿರಿಬಡತನ ವಿಚಿತ್ರದ
ಸೂಜಿಯಿರಿಪಕ್ಷಣ ಕ್ಷಣವು ಹಿಂಸಿಪ
ರಾಜರಾಜನೆ ಜೀಯ ಉದ್ದಾನೇಶದಯವಾಗೋ ॥

# ರಫ್ತು ಅಭಿವೃದ್ಧಿಯಲ್ಲಿ ಮಾರಾಟ ಸಂಶೋಧನೆಯ ಪಾತ್ರ

ಡಿ. ವೆಂಕಟರಾವ್, ಎಂ.ಎ., ರೀಡರ್, ಸರ್ಕಾರಿ ಕಲಾಕಾಲೇಜ್, ಹಾಸನ.

ಭಾರತದಂತಹ ಅಭಿವೃದ್ಧಿ ಶೀಲ ರಾಷ್ಟ್ರಗಳ ಆರ್ಥಿಕ ಪುನರ್ನಿರ್ಮಾಣದಲ್ಲಿ ರಫ್ತು ವ್ಯಾಪಾರವು ಮಹತ್ವಪೂರ್ಣಸ್ಥಾನವನ್ನು ಪಡೆದುಕೊಂಡಿದೆ. ನಮ್ಮ ದೇಶದ ಸರ್ವತೋಮುಖ ಪ್ರಗತಿಯ ಸಾಧನೆಯಾಗಬೇಕಾದರೆ ವಿದೇಶಿವಿನಿಮಯ ತುಂಬಾ ಆಗತ್ಯ. ಈ ಅಗತ್ಯವನ್ನು ಸಾಧಿಸಲು ನಮಗಿರುವ ಏಕೈಕ ಮಾರ್ಗವೆಂದರೆ ರಫ್ತು ವ್ಯಾಪಾರ. ಒಂದು ದೇಶದ ಆರ್ಥಿಕ ಪುರೋಭಿವೃದ್ಧಿ ಸಾಧನೆಯ ದೃಷ್ಟಿಯಿಂದ ರಫ್ತುವ್ಯಾಪಾರದ ಪಾತ್ರ ಅಪಾರ ಆದ್ದರಿಂದಲೇ ಇತ್ತೀಚಿನ ವರ್ಷಗಳಲ್ಲಿ ಭಾರತ ದಲ್ಲಿ ರಫ್ತು ಮಾರುಕಟ್ಟೆಯ ವ್ಯಾಪ್ತಿಯನ್ನು ವಿಸ್ತರಿಸಲು ಸತತವಾಗಿ ಶ್ರಮಿಸ ಲಾಗುತ್ತಿದೆ, ಇದರ ಫಲವಾಗಿ ನಮ್ಮ ದೇಶದ ರಫ್ತುವ್ಯಾಪಾರದಲ್ಲಿ ಗಮನಾರ್ಹ ಪ್ರಮಾಣದ ಹೆಚ್ಚಳವಾಗಿದ್ದರೂ ತೃಪ್ತಿಕರ ಗುರಿಯನ್ನು ಮುಟ್ಟಿಲ್ಲ. ಈ ದಿಸೆ ಯಲ್ಲಿ ನಾವು ಇನ್ನೂ ಬಹುದೂರ ಸಾಗಬೇಕಾಗಿದೆ.

ಇದು ಪೈಪೋಟಿಯ ಯುಗ. ಇದರಿಂದಾಗಿ ಇಂದು ಸರಕುಗಳನ್ನು ಸ್ಥಳೀಯ ಅಂತರ್ದೇಶಿಯ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದೇ ಕಷ್ಟವಾಗಿದೆ. ಪರಿಸ್ಥಿತಿ ಹೀಗಿರುವಾಗ ಇನ್ನು ನಮ್ಮ ಸರಕುಗಳನ್ನು ದೂರದ, ಮುಂದುವರಿದ ರಾಷ್ಟ್ರಗಳ ಸ್ಪರ್ಧಾತ್ಮಕ ಮಾರುಕಟ್ಟೆಗಳಲ್ಲಿ ಮಾರಾಟಮಾಡುವುದು ಎಷ್ಟೊಂದು ದುಸ್ತರ ಎಂದು ಬೇರೆ ಹೇಳಬೇಕಾಗಿಲ್ಲ. ನಮ್ಮ ರಫ್ತುವ್ಯಾಪಾರದ ಪ್ರಮಾಣ ವನ್ನು ಹೆಚ್ಚಿಸಿ, ಅದರ ವ್ಯಾಪ್ತಿಯನ್ನು ವಿಸ್ತರಿಸಿದಾಗ ಮಾತ್ರ ನಾವು ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ದಿನೇ ದಿನೇ ಹೆಚ್ಚುತ್ತಿರುವ ತೀವ್ರ ಸ್ಪರ್ಧೆಯನ್ನು ಎದುರಿಸಬಲ್ಲೆವು, ಇದಕ್ಕಾಗಿ ನಾವು ದೇಶದ ಒಳಗೂ ಹೊರಗೂ ರಫ್ತುವ್ಯಾಪಾರ ಅಭಿವೃದ್ಧಿಗೆ ಅನುಕೂಲಕರವಾದ ವಾತಾವರಣವನ್ನು ನಿರ್ಮಿಸಬೇಕಲ್ಲದೆ, ಅಗತ್ಯ ವಾದ ಪೂರ್ವ ಸಿದ್ಧತೆಗಳನ್ನೂ ಮಾಡಿಕೊಳ್ಳಬೇಕು.

## ವಿದೇಶಿ ಮಾರುಕಟ್ಟೆಗಳ ಬಗ್ಗೆ ಅಧ್ಯಯನ

ವಿದೇಶಿ ಮಾರುಕಟ್ಟೆಗಳಿಗೆ ನಮ್ಮ ಸರಕುಗಳನ್ನು ರಫ್ತುಮಾಡುವುದಕ್ಕೆ ಮೊದಲು, ಆ ದೇಶಗಳ ಮಾರುಕಟ್ಟೆಗಳ ಸ್ಥಿತಿ-ಗತಿಗಳ ಬಗ್ಗೆ ಆಳವಾದ ಅಧ್ಯ ಯನ ನಡೆಸುವುದು ಒಳಿತು. ಅಂದರೆ ಆ ದೇಶಗಳ ಗಿರಾಕಿಗಳ ಅಗತ್ಯಗಳ ಮತ್ತು ಬೇಡಿಕೆಗಳ ಬಗ್ಗೆ ಚೆನ್ನಾಗಿ ತಿಳಿಯಬೇಕು ಹಾಗೂ ಆ ದೇಶಗಳ ಮಾರುಕಟ್ಟೆಗಳಲ್ಲಿ ನಮ್ಮ ಸರಕುಗಳನ್ನೂ ಮಾರಾಟ ಮಾಡಬಹುದಾದ ಸಾಧ್ಯತೆಗಳ ಬಗೆಗೂ,

ಆ ಮಾರುಕಟ್ಟೆಗಳಲ್ಲಿ ನಾವು ಎದುರಿಸಬೇಕಾಗಬಹುದಾದ ಸಮಸ್ಯೆಗಳ ಬಗೆಗೂ ಅರಿಯಬೇಕು, ನಾವು ನಮ್ಮ ಸರಕುಗಳನ್ನು ವಿದೇಶಿ ಮಾರುಕಟ್ಟೆಗಳಿಗೆ ಬಿಟ್ಟನಂತರ ವಿದೇಶಿಗಿರಾಕಿಗಳು ನಮ್ಮ ಸರಕುಗಳ ಬಗ್ಗೆ ತಳೆಯುವ ಅಭಿಪ್ರಾಯ, ಪ್ರತಿ ಕ್ರಿಯೆ-ಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು, ಒಟ್ಟಿನಲ್ಲಿ ವಿದೇಶಿ ಮಾರುಕಟ್ಟೆಗಳ ಬಗ್ಗೆ ಸ್ಥೂಲ ಪರಿಚಯ, ಆ ಮಾರುಕಟ್ಟೆಗಳಲ್ಲಿ ವ್ಯವಹರಿಸುವ ವಿಧಾನ, ರೀತಿ-ನೀತಿಗಳ ಬಗ್ಗೆ ಪರಿಶ್ರಮ.-ಇವು ರಫ್ತು ವ್ಯಾಪಾರವನ್ನು ಅಭಿವೃದ್ಧಿ ಪಡಿಸುವ ಮುಖ್ಯ ಸಾಧನ ಗಳಾಗಿವೆ.

**ಮಾರಟ ಸಂಶೋಧನೆ:–**

ರಫ್ತು ವ್ಯಾಪಾರದ ಅಭಿವೃದ್ಧಿಯಲ್ಲಿ ಮಾರಟ ಸಂಶೋಧನೆಯ ನೆರವು ಪ್ರಮುಖ ಪಾತ್ರವಹಿಸುತ್ತದೆ. ರಫ್ತುವ್ಯಾಪಾರದಲ್ಲಿ ಗಿರಾಕಿಗೆ ಮುಖ್ಯ ಸ್ಥಾನವಿರುವುದರಿಂದ ನಮ್ಮ ವಿದೇಶಿವ್ಯಾಪಾರ ಕಾರ್ಯಕ್ರಮವು ಗಿರಾಕಿಯನ್ನೇ ಪ್ರಧಾನವಾಗಿಟ್ಟುಕೊಳ್ಳಬೇಕಾದುದು ಅಗತ್ಯ. ವಿದೇಶಿ ಗಿರಾಕಿಗಳು ವಿವಿಧ ದೇಶಗಳ ಬಗೆಬಗೆಯ ಸರಕುಗಳನ್ನು ಅವಲೋಕಿಸಿ, ತಮಗೆ ಇಷ್ಟವೆನಿಸಿದ ಸರಕನ್ನೇ ಆರಿಸಿಕೊಳ್ಳಬಹುದಾದ್ದರಿಂದ ನಾವು ಅವರ ಅಗತ್ಯಗಳನ್ನು, ಬೇಡಿಕೆಗಳನ್ನು ಎಲ್ಲ ದೃಷ್ಟಿಯಿಂದಲೂ ಸಮಗ್ರವಾಗಿ, ವಿವೇಚನಾಪೂರ್ಣವಾಗಿ ಪರಿಶೀಲಿಸಬೇಕು. ಇದರ ಬಗ್ಗೆ ಸ್ಪಷ್ಟನೆಯನ್ನ ದೊರಕಿಸಿಕೊಳ್ಳಲು, ಆಯಾ ದೇಶಗಳಲ್ಲಿ ತಜ್ಞ, ಅಭ್ಯಾಸ ಪೂರ್ಣಮಾರುಕಟ್ಟೆ ಸಮೀಕ್ಷೆಗಳನ್ನು ನಡೆಸಬೇಕು. ಇಂತಹ ಸಮೀಕ್ಷೆಗಳಿಂದ ವಿದೇಶಿ ಗಿರಾಕಿಗಳ ನಿತ್ಯಸೇವನಾ ವಿಧಾನಗಳು, ಒಲವಿನ ಪ್ರವೃತ್ತಿಗಳು, ಬೇಕು ಬೇಡಗಳು ಇವೇ ಮುಂತಾದ ಅತ್ಯಾವಶ್ಯಕ ಮಾಹಿತಿಯನ್ನು ಸಂಗ್ರಹಿಸಬಹುದು. ಅಲ್ಲದೆ, ಯಾವ ಯಾವ ದೇಶದ ಮಾರುಕಟ್ಟೆಯಲ್ಲಿ ನಮ್ಮ ದೇಶದ ಯಾವ ಯಾವ ಸರಕಿಗೆ ಬೇಡಿಕೆ ಇದೆ, ಯಾವ ಯಾವ ವಿದೇಶಿ ಮಾರುಕಟ್ಟೆಯಲ್ಲಿ ನಮ್ಮ ದೇಶದ ಸರಕುಗಳ ಮಾರಾಟವನ್ನು ಹೆಚ್ಚಿಸುವ ಸಾಧ್ಯತೆಗಳಿವೆ, ಕೆಲವೊಂದು ವಿದೇಶಿ ಮಾರುಕಟ್ಟೆಗಳಲ್ಲಿ ನಮ್ಮ ಉತ್ಪನ್ನಗಳಿಗೆ ಬೇಡಿಕೆ ಕಡಿಮೆಯಾಗಿದ್ದರೆ ಅದಕ್ಕೆ ಕಾರಣಗಳೇನು, ಅಂತಹ ಮಾರುಕಟ್ಟೆಗಳಲ್ಲಿ ನಮ್ಮ ವ್ಯಾಪಾರ ಕುದುರಿಸಿಕೊಳ್ಳಲು ನಾವು ಕೈಗೊಳ್ಳಬೇಕಾದ ಕ್ರಮಗಳು ಯಾವುವು, ಅನುಸರಿಬಹುದಾದ ನೂತನ ಮಾರಾಟ ತಂತ್ರಗಳಾವುವು – ಇವೇ ಮುಂತಾದ ಅತಿ ಮುಖ್ಯ ವಿಷಯಗಳ ಮೇಲೆ ಮಾರಾಟ ಸಮೀಕ್ಷೆಗಳು ನಿಚ್ಚಳ ಬೆಳಕು ಚೆಲ್ಲುತ್ತವೆ.

ಮಾರಾಟ ಸಮೀಕ್ಷೆಗಳು ಹೊಸ ಮಾರುಕಟ್ಟೆಗಳನ್ನು ಕಂಡು ಹಿಡಿಯುವಿಕೆಗೂ ನೆರವಾಗುತ್ತವೆ. ಗಿರಾಕಿಗಳ ಆಸೆ, ಅಭಿಲಾಷೆಗಳು ಸದಾಕಾಲವೂ ಎಂದಿನಂತೆಯೇ ಇರುವುದಿಲ್ಲ. ಕಾಲದಿಂದಕಾಲಕ್ಕೆ ಅವರ ಅಭಿರುಚಿಗಳು ಬದಲಾಗುತ್ತವೆ. ಇಂತಹ ಬದಲಾವಣೆಗಳನ್ನು ಅತಿ ಎಚ್ಚರದಿಂದ ಗಮನಿಸಿ, ಅದಕ್ಕನುಗುಣವಾಗಿ ನಮ್ಮ ಉತ್ಪಾದನಾ, ತಯಾರಿಕಾ ವಿಧಾನಗಳನ್ನು ಪರಿಷ್ಕರಿಸಿಕೊಳ್ಳಬೇಕು. ಆದ್ದರಿಂದ ಮಾರಾಟ ಸಂಶೋಧನೆಯು ಈ ಅಂಶಗಳಿಗೆ ಸಂಬಂಧಿಸಿರಬೇಕು.

ವಿದೇಶಿ ವ್ಯಾಪಾರಕ್ಕೆ ತಗುಲುವ ವೆಚ್ಚ ಅಧಿಕವಾದುದರಿಂದ ನಾವು ಹೆಚ್ಚಿನ ಎಚ್ಚರ ವಹಿಸುವುದು ಅಗತ್ಯ. ಅಂದರೆ ವಿದೇಶಿ ವ್ಯಾಪಾರದಲ್ಲಿ ನಮ್ಮ ಪರಿಮಿತ ಆರ್ಥಿಕ ಸಂಪನ್ಮೂಲಗಳ ಅಪವ್ಯಯಗಳನ್ನು ತಪ್ಪಿಸಬೇಕು, ಇದಕ್ಕಾಗಿ ತಜ್ಞ ಮಾರುಕಟ್ಟೆ ಸಮೀಕ್ಷೆಗಳ ಆಧಾರದ ಮೇಲೆ, ವಿವಿಧ ವಿದೇಶಿಮಾರುಕಟ್ಟೆಗಳ ಆಮದು ಮಾಡಿಕೊಳ್ಳುವ ಸತ್ವ-ಸಾಮರ್ಥ್ಯಗಳನ್ನು ಅಳೆದು, ಅರಿಯಬೇಕು. ಯಾವ ಯಾವ ಮಾರುಕಟ್ಟೆಗಳಲ್ಲಿ ನಮ್ಮ ಉತ್ಪನ್ನಗಳ ಮಾರಾಟವನ್ನು ಹೆಚ್ಚಿಸುವ ಅವಕಾಶಗಳು, ಸಾಧ್ಯತೆಗಳು ಕಂಡುಬರುತ್ತವೆಯೋ, ಅಂತಹ ಮಾರುಕಟ್ಟೆಗಳಲ್ಲಿ ನಮ್ಮ ಮಾರಾಟ ವ್ಯವಹಾರವನ್ನು ಹೆಚ್ಚಿಸಲು ವಿಶೇಷವಾಗಿ ಪ್ರಯತ್ನಿಸಬೇಕು. ಇಂತಹ ವಾಸ್ತವಿಕ ವ್ಯವಹಾರಿಕ ತಳಹದಿಯ ಮೇಲೆ ನಮ್ಮ ರಫ್ತು ವ್ಯಾಪಾರವನ್ನು ವಿಸ್ತರಿಸಿದಲ್ಲಿ ಆರ್ಥಿಕ ಸಂಪನ್ಮೂಲಗಳ ವೃಥಾವ್ಯಯ ತಪ್ಪುತ್ತದೆ

ನಮ್ಮ ರಫ್ತು ಮಾರುಕಟ್ಟೆಯು ಕೇವಲ ವಿದೇಶಿ ಮಾರುಕಟ್ಟೆಯ ವಿಸ್ತರಣೆ ಎಂದು ಭಾವಿಸಬಾರದು, ವಿದೇಶಿ ಗ್ರಾಹಕರ ವಿಶಿಷ್ಟ ಅಗತ್ಯಗಳಿಗೆ, ಬೇಡಿಕೆಗಳಿಗೆ ಅನುಗುಣವಾಗಿಯೇ ನಮ್ಮ ಸರಕು ಸಾಮಗ್ರಿಗಳು ತಯಾರಾಗಬೇಕು. ವಿದೇಶಗಳಿಗೆ ರಫ್ತಾಗುವ ಸರಕುಗಳ ಗುಣಮಟ್ಟ, ವಿನ್ಯಾಸ, ಹಂಚಿಕೆ ವ್ಯವಸ್ಥೆ, ವಿದೇಶ ಮಾರುಕಟ್ಟೆಗಳಲ್ಲಿನ ತೀವ್ರ ಸ್ಪರ್ಧೆ ಇವೇ ಮುಂತಾದ ಅಂಶಗಳ ಬಗ್ಗೆ ಹೆಚ್ಚಿನ ಗಮನ ನೀಡಬೇಕು. ಈ ದಿಸೆಯಲ್ಲಿ ಮಾರಾಟ ಸಂಶೋಧನೆ ಉಪಯುಕ್ತ ಸೇವೆ ಸಲ್ಲಿಸಬಹುದು.

ಇತ್ತೀಚೆಗೆ ನಮ್ಮ ರಫ್ತು ವ್ಯಾಪಾರವನ್ನು ಹೆಚ್ಚಿಸಲು ಸ್ತುತ್ಯಾರ್ಹ ಪ್ರಯತ್ನ ನಡೆಸಲಾಗಿದೆ ಯಾದರೂ, ಮಾರಾಟ ಸಂಶೋಧನೆಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತಿಲ್ಲ. ಭಾರತ ಸರಕಾರದ ವಿದೇಶಿ ವ್ಯಾಪಾರ ಸಮಿತಿ, ರಫ್ತು ಅಭಿವೃದ್ಧಿ ಮಂಡಲಿಗಳು ಈದಿಸೆಯಲ್ಲಿ ಅಷ್ಟಿಷ್ಟು ಕಾರ್ಯ ನಿರ್ವಹಿಸುತ್ತಿವೆಯಾದರೂ, ಇನ್ನೂ ಹೆಚ್ಚಿನ ಪ್ರಯತ್ನ, ವ್ಯಾಪಕವಾದ ಮಾರಾಟ ಸಂಶೋಧನಾ ಕಾರ್ಯಕ್ರಮಗಳು ಅಗತ್ಯವೆನಿಸಿವೆ. ರಫ್ತು ವ್ಯಾಪಾರ ಕ್ಷೇತ್ರದಲ್ಲಿ ಸತತವಾದ ಹಾಗೂ ಸುವ್ಯವಸ್ಥಿತ ಮಾರಾಟ ಸಂಶೋಧನೆಗೆ

ಅನುಕೂಲವಾಗುವಂತೆ, ರಫ್ತು ಮಾರುಕಟ್ಟೆ ಸಂಶೋಧನಾ ಸಂಸ್ಥೆಯೊಂದನ್ನು ಸ್ಥಾಪಿಸಿದಲ್ಲಿ ಹೆಚ್ಚಿನ ಪ್ರಯೋಜನ ಹೊಂದಬಹುದು. ವಿದೇಶಿ ವ್ಯಾಪಾರ ಸಮಿತಿಯ ಆಶ್ರದಲ್ಲಿ ಸ್ಥಾಪಿಸಬಹುದಾದ ಈ ಸಂಸ್ಥೆಯಲ್ಲಿ ಖಾಸಗಿ ರಫ್ತು ವ್ಯಾಪಾರ ಸಂಸ್ಥೆಗಳ ಪ್ರತಿನಿಧಿಗಳು, ಮಾರಾಟ ತಜ್ಞರೂ ಇರಬೇಕು ಜಗತ್ತಿನ ಪ್ರಮುಖ ವ್ಯಾಪಾರ ಕೇಂದ್ರಗಳಲ್ಲೆಲ್ಲ ಈ ಸಂಸ್ಥೆಯ ಶಾಖೆಗಳನ್ನು ತೆರೆದು, ಆ ದೇಶಗಳಲ್ಲಿರುವ ಭಾರತದ ರಾಯಭಾರ ಕಛೇರಿಗಳ ಆರ್ಥಿಕ ಶಾಖೆಗಳ ನೆರವಿನೊಂದಿಗೆ ಮಾರುಕಟ್ಟೆ ಸಮೀಕ್ಷೆ ನಡೆಸಿ, ಕಾಲ ಕಾಲಕ್ಕೆ ತಜ್ಞ, ಸಮೀಕ್ಷಾವರದಿಗಳನ್ನು ಸಿದ್ಧಪಡಿಸಿ, ಅವುಗಳನ್ನು ಎಲ್ಲ ರಫ್ತು ವ್ಯಾಪಾರೋದ್ಯಮಿಗಳಿಗೂ ಕ್ರಮವಾಗಿ ಕಳಿಸಿಕೊಡಬೇಕು. ಈ ಸಂಸ್ಥೆಯ ವತಿಯಿಂದಲೇ ಒಂದು ಸಲಹಾ ವಿಭಾಗವನ್ನು ರಚಿಸಿಕೊಂಡು' ರಫ್ತಿಗಾಗಿ ಸರಕುಗಳನ್ನು ತಯಾರಿಸುವ ಸಂಸ್ಥೆಗಳಿಗೆ, ಉದ್ಯಮಿಗಳಿಗೆ ಸೂಕ್ತ - ಸಲಹೆ - ಸೂಚನೆಗಳನ್ನು ನೀಡುವ ವ್ಯವಸ್ಥೆ ಮಾಡಬೇಕು, ಈ ಸಂಸ್ಥೆ ನಡೆಸುವ ಮಾರಾಟ ಸಂಶೋಧನಾ ಕಾರ್ಯಕ್ರಮಗಳ ಆಧಾರದ ಮೇಲೆ, ಸರ್ಕಾರವು ತನ್ನ ರಫ್ತು ವ್ಯಾಪಾರ ನೀತಿಯನ್ನು ರೂಪಿಸಿಕೊಳ್ಳಬೇಕು. ಜೊತೆಗೆ ರಫ್ತು, ವ್ಯಾಪಾರದಲ್ಲಿ ತೊಡಗಿರುವ ಖಾಸಗಿ ಸಂಸ್ಥೆಗಳಿಗೂ, ಉದ್ಯಮಿಗಳಿಗೂ ಸೂಕ್ತ ನಿರ್ದೇಶನಗಳನ್ನು ಕೊಡಬೇಕು. ಮಾರಾಟ ಸಂಶೋಧನೆಯ ಮಹತ್ವವನ್ನು ಲಕ್ಷಿಸಿ, ಇಂತಹ ಒಂದು ಸಾಂಸ್ಥಿಕ ವ್ಯವಸ್ಥೆಯನ್ನು ರೂಪಿಸುವುದು ಇಂದಿನ ದಿನಗಳಲ್ಲಿ ಅತ್ಯಗತ್ಯವಾಗಿದೆ. ರಫ್ತು ವ್ಯಾಪಾರದ ಅಭಿವೃದ್ಧಿಯಲ್ಲಿ ರಾಷ್ಟ್ರೀಯ ಮಾರಾಟ ಮಹಾಮಂಡಳಿಯ ಜವಾಬ್ದಾರಿ ಹೆಚ್ಚಿನದಾಗಿದೆ. ಆದ್ದರಿಂದ ಅದು ಮಾರಾಟ ಸಂಶೋಧನಾತ್ಮಕ ಸಮೀಕ್ಷೆಗಳನ್ನು ಆಗಿಂದಾಗ್ಗೆ ನಡೆಸುತ್ತಿರಬೇಕು. ವಿದೇಶಿ ಮಾರುಕಟ್ಟೆಗಳ ಬಗ್ಗೆ ಆಳವಾದ, ಅಭ್ಯಾಸ ಪೂರ್ಣ ಸಂಶೋಧನೆ ನಡೆಸಿ, ತನ್ನ ರಫ್ತು ಮಾರುಕಟ್ಟೆಯ ವ್ಯಾಪ್ತಿಯನ್ನು ವಿಸ್ತರಿಸಲು ಸತತವಾಗಿ ಶ್ರಮಿಸಬೇಕು. ವಿದೇಶಗಳಿಗೆ ರಫ್ತು ಮಾಡುವ ಸರಕುಗಳ ಗುಣಮಟ್ಟವನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದ ಮಹಾಮಂಡಳಿಯು ಗುಣ ನಿಯಂತ್ರಣ ವಿಭಾಗವೊಂದನ್ನು ರಚಿಸಿಕೊಳ್ಳಬೇಕು.

ಎಚ್.ಆರ್. ಡೆಲೆನ್ಸ್ ಪ್ರಕಾರ "ಸೇನಾಪತಿಗೆ ಸಮರ ಜ್ಞಾನ ಎಷ್ಟು ಅಗತ್ಯವೋ ವ್ಯಾಪಾರಿಗೆ, ಮಾರಾಟ ಸಂಶೋಧನೆ ಅಷ್ಟು ಅಗತ್ಯ, ಅಷ್ಟು ಉಪಯುಕ್ತ." ಆದ್ದರಿಂದ ಮಾರಾಟ ಸಂಶೋಧನೆಗಳನ್ನು ನಡೆಸಿದಲ್ಲದೆ ನಮ್ಮ ರಫ್ತು ವ್ಯಾಪಾರವು ನಿರೀಕ್ಷಿಸಿದಷ್ಟು ಮಟ್ಟಿಗೆ ಅಭಿವೃದ್ಧಿ ಹೊಂದುವುದು ಸಾಧ್ಯವಿಲ್ಲ ಎಂಬುದನ್ನು ನಾವು ಸದಾ ನೆನಪಿನಲ್ಲಿಡಬೇಕು.



## ವಿದ್ಯಾರ್ಥಿ ಜೀವನದ ಬೆಳಕು ಸರಣಿ, ಲೇಖನ :-೨

ಲೇ|| ಬಿ.ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸರಸ್ತೆ, ಮೈಸೂರು–570 024

**ವಿದ್ಯಾರ್ಥಿಯ ಯಶಸ್ಸಿನ ಗುಟ್ಟು :-** ವಿದ್ಯಾರ್ಥಿಯ ಯಶಸ್ಸು ತಾನು ಕೈಕೊಳ್ಳುವ ಕಾರ್ಯ ಮತ್ತು ಆಚರಣೆಗಳಲ್ಲಿವೆ. ( Don't Postpone till tomorrow what you should do to day) ಎಂಬಂತೆ ಇಂದು ಮಾಡಬೇಕಾದ ಕಾರ್ಯವನ್ನು ಇಂದೇ ಮಾಡಿ ಮುಗಿಸು. ಏಕೆಂದರೆ ( Tomorrow may not come to your expectation) ನೀನು ನೆನಸಿಕೊಂಡಿರುವಂತೆ ನಿನ್ನ ಪಾಲಿಗೆ ನಾಳೆ ಬರದಿದ್ದೀತು! ಈ ವಾಕ್ಯವನ್ನು ಎಂದಿಗೂ ಸುಳ್ಳು ಮಾಡುವಂತಿಲ್ಲ. ನಾಳೆಯೇನೋ ಬರುತ್ತದೆ, ನಿಜ! ಆದರೆ ಇಂದು ನೀನು ನೆನಸಿ ಮಾಡಬೇಕೆಂದಿದ್ದ ಕಾರ್ಯ ನೀನು ಎಣಿಸಿದ್ದಂತೆ ಅಷ್ಟು ಪರಿಣಾಮಕಾರಿಯಾಗಿ ಬರಲಾರದು.

ನಾಳೆಯೆಂಬುದು ಹಾಳು! ಆದ್ದರಿಂದ ಇದರ ಗೂಢಾರ್ಥವನ್ನು ತಿಳಿದು, ಅಂದಂದಿನ ಕಾರ್ಯಗಳನ್ನು ನಿಲ್ಲಿಸದೆ ಅಂದಂದೇ ಮಾಡಿ ಮುಗಿಸು. ಕೆಲವರನ್ನು ಏನಾದರೂ ಕೇಳಿದರೆ ನಾಳೆಯಾಗಲಿ, ಕೊಡುತ್ತೇನೆ ಅನ್ನುವರು. ಅವರ ಅರ್ಥದಲ್ಲಿ ಕೇಳಿದ್ದನ್ನು ಕೊಡಲು ಇಷ್ಟವಿಲ್ಲದಿರಬಹುದು ಅಥವಾ ಕೊಟ್ಟರೆ ಅವರಿಂದ ಹಿಂತಿರುಗಿ ಬರುವುದಿಲ್ಲವೆಂಬ ಅನುಮಾನವೂ ಇದ್ದೀತು! ಏನೇ ಇರಲಿ, ನೆನಸಿಕೊಂಡಿದ್ದನ್ನು ಅಂದಿನ ದಿನವೇ ಮಾಡುವುದು ಹಿತಕರ. ಕಾರ್ಯ ಸಾಧನೆಗೆ ಮನಸ್ಸಿಗೆ ಹೊಳೆದ ತಕ್ಷಣ ಮಾಡಿದರೆ ಯಶಸ್ಸು ಖಂಡಿತ. ಕಾಲವನ್ನು ಅಪವ್ಯಯಮಾಡಬಾರದು. ವ್ಯರ್ಥವಾಗಿ ಕಾಲಹರಣ ಮಾಡಿದರೆ ಸಾಧಿಸಬೇಕಾಗಿದ್ದ ಕಾರ್ಯ ನಿಂತು ಕಳೆದು ಹೋದ ಕಾಲ ಹಿಂತಿರುಗಿ ಬರುವುದಿಲ್ಲ.

ಕಾಲ ಅಮೂಲ್ಯವಾದುದು. ಜೀವನದಲ್ಲಿ ಹೆಚ್ಚು ವೇಳೆ ಸಕಾಲದಲ್ಲಿ ಮಾಡದಿರುವುದೇ ಆಗಿದೆ. ಬಹಳ ಮಟ್ಟಿಗೆ ಆಲಸ್ಯ, ಸೋಮಾರಿತನ, ಧೋರಣೆ ಇವುಗಳು ಮನುಷ್ಯನಿಗೆ ಶತೃಗಳು, ಕಾಲವನ್ನು ಅಪವ್ಯಯ ಮಾಡದೆ ಯೋಚಿಸಿ ಕಾರ್ಯಗಳನ್ನು ಮಾಡಿದರೆ ಜಯವು ತಾನಾಗಿ ಸಿದ್ಧಿಸಿಜನರ ಮನರಂಜನೆ, ಸ್ನಾನ ಅಲಂಕಾ ಊಟ, ನಿದ್ದೆ, ಕಾಡಹರಟೆ ಇವುಗಳಲ್ಲಿ ಬಹಳ ವೇಳೆ ಕಳೆದು ಹೋಗುತ್ತದೆ.ಉಳಿದಿರುವ ವೇಳೆಯನ್ನಾದರೂ ಸದುಪಯೋಗ ಪಡಿಸಿಕೊಳ್ಳುವುದು ಉಚಿತ ಮಾರ್ಗ.

ಯಶಸ್ಸು ಸುಮ್ಮನೆ ಬರುವುದಿಲ್ಲ. ಇದಕ್ಕೆ ದೃಢವಾದ ಪ್ರಯತ್ನ, ನಿಶ್ಚಲವಾದ ಮನಸ್ಸು ಇರಲೇಬೇಕು. ಆಗಲೇ ಇಚ್ಛೆ ನೆರವೇರುವುದು.

# ಈ ಅಂಗಡಿಯಲ್ಲಿ ಏನೂ ಮಾರುವುದಿಲ್ಲ !

ಬಿ. ಸುಬ್ರಾಯ ಅಡಿಗ. ನಿವೃತ್ತ ಅಧ್ಯಾಪಕರು. ಸಂಡೂರು. ಬಳ್ಳಾರಿ-ಜಿಲ್ಲೆ.

ಸಾಮಾನುಗಳೇ ಇರದ ಅಂಗಡಿಗಳನ್ನು ನೀವು ಕಂಡಿರಬಹುದು. ಸಾಹುಕಾರರು ಹಾಗೂ ಅವರ ಗುಮಾಸ್ತರು ಲೆಕ್ಕದ ಪುಸ್ತಕಗಳನ್ನು ತೆರೆದು ತಮ್ಮ ಕೆಲಸ ಮಾಡುತ್ತಿರುತ್ತಾರೆ. ಇಂಥ ಅಂಗಡಿಗಳಲ್ಲಿ ಗಿರಾಕಿಗಳು ಹೆಚ್ಚಾಗಿ ಕಾಣಸಿಗುವುದಿಲ್ಲ. ಈ ಅಂಗಡಿಗಳಲ್ಲಿ ಸಾಮಾನುಗಳು 'ಹೋಲ್ ಸೇಲ್' (ಥೋಕ್) ಆಗಿ ಮಾರಾಟವಾಗುತ್ತವೆ. ಆದರೆ ಸಾಮಾನುಗಳು ಬೇರೆಲ್ಲೋ ಗೋದಾಮುಗಳಲ್ಲಿರುತ್ತವೆ. ಗಿರಾಕಿ ಬಂದಾಗ ಅವನಿಂದ ಹಣಪಡೆದು ಗೋದಾಮಿನ ಮ್ಯಾನೇಜರನ ಹೆಸರಿಗೆ ಚೀಟಿ ಬರೆದು ಕೊಡುತ್ತಾರೆ. ಆದರೆ ನಾವೀಗ ಪ್ರಸ್ತಾಪಿಸಲಿರುವ ಅಂಗಡಿಯಲ್ಲಿ ಯಾವುದೇ ಮಾರಾಟ ನಡೆಯುವುದಿಲ್ಲ. ಈ ಅಂಗಡಿ ಯಾವುದೇ ಗೋದಾಮು ಹೊಂದಿಲ್ಲ. ಹೀಗಿದ್ದರೂ ಇಲ್ಲಿ ಹಲವಾರು ಮಾರಾಟಗಾರರು (ಸೇಲ್ ಮೆನ್) ಕೆಲಸ ಮಾಡುತ್ತಾರೆ. ಇವರ ಬಳಿ ಬಿಲ್‌ಪುಸ್ತಕ ಹಾಗೂ ಕ್ಯಾಶ್‌ಮೆಮೋ ಇರುತ್ತವೆ. ಇಷ್ಟಾದರೂ ಯಾವ ಸಾಮಾನನ್ನು ಇಲ್ಲಿ ಮಾಡಲಾಗುವುದಿಲ್ಲ !

ಇದು ಪ್ರಪಂಚದಲ್ಲೇ ಅತಿ ವಿಚಿತ್ರ ಅಂಗಡಿಯಾಗಿದ್ದು ಪ್ರಾಯೋಗಿಕವಾಗಿ ಆರಂಭಿಸಲಾಯಿತು. ಪೂರ್ವ ಲಂಡನಿನಲ್ಲಿರುವ ಈ ಅಂಗಡಿಯ ಕೀರ್ತಿ ಇಂಗ್ಲೆಂಡಿನ ಮೇರೆಯನ್ನು ದಾಟ ವಿಶ್ವಾದ್ಯಂತ ಹರಡಿದೆ. ಇದು ಎಷ್ಟೊಂದು ಕೀರ್ತಿ ಪಡೆಯಿತೆಂದರೆ ಅಮೇರಿಕ, ಜರ್ಮನಿ, ಭಾರತ, ಪಾಕ್ಿಸ್ತಾನ, ಫ್ರಾನ್ಸ್, ಟರ್ಕಿ, ಆಸ್ಟ್ರೇಲಿಯಾ, ಹಾಗೂ ನ್ಯೂಜಿಲ್ಯಾಂಡ್ ಸರಕಾರಗಳು ತಮ್ಮ ಪ್ರತಿನಿಧಿಗಳನ್ನು ಕಳುಹಿಸಿ ಈ ಅಂಗಡಿಯ ಕಾರ್ಯಪ್ರಣಾಳಿಯನ್ನರಿಯಲು ಪ್ರಯತ್ನಿಸಿದವು.

ಪೂರ್ವ ಲಂಡನ್ನಿನ ಈ ಅಂಗಡಿಯನ್ನು ಸರಾಫರ ಒಂದು ಸಂಸ್ಥೆ ನಡೆಸುತ್ತಿದೆ. ಈ ಅಂಗಡಿಯಲ್ಲಿ ದುಡಿಯುವ ನೌಕರರು ತಮ್ಮ ತಮ್ಮ ವಿಭಾಗಗಳ ಗಿರಾಕಿಗಳಿಗೆ ಸರಿಯಾದ ಸಲಹೆ ಕೊಡುತ್ತಾರೆ. ಗಿರಾಕಿಗಳು ಬಯಸುವ ವಸ್ತುಗಳು ಯಾವ ದೇಶದ ಯಾವ ಅಂಗಡಿಗಳಲ್ಲಿ ಸರಿಯಾದ ಬೆಲೆಗೆ ದೊರೆಯುವುದೆಂಬ ಮಾಹಿತಿ ನೀಡುತ್ತಾರೆ.

ಇಂದು ಎಲ್ಲೆಡೆಯಲ್ಲೂ ಅಪ್ರಾಮಾಣಿಕತೆ, ವಂಚನೆ, ದುಬಾರಿಬೆಲೆ, ಕಡಿಮೆ ತೂಕ, ಕಲಬೆರಕೆ-ಮೊದಲಾದ ದೂರುಗಳು ಕೇಳಿಬರುತ್ತಿವೆ. ಅಪ್ರಾಮಾಣಿಕತೆ ಹಾಗೂ ವಂಚನೆ - ಎಲ್ಲೆಡೆಯಲ್ಲೂ ಇವೆ. ಅವುಗಳ ಅನುಪಾತ ಮಾತ್ರ ಹೆಚ್ಚು ಕಡಿಮೆ ಇದ್ದೀತು. ಹಾಲು, ಮೊಸರು, ಬೆಣ್ಣೆ, ತುಪ್ಪ ಮೊದಲಾದವು ಕಲಬೆರಕೆಯಿಲ್ಲದೆಯೂ ಸಿಗಬಹುದು. ಆದರೆ ಕಾರು, ಹಡಗು, ವಿಮಾನ, ಯಂತ್ರ, ಪ್ರೆಸ್ ಮೊದಲಾದವುಗಳ ಖರೀದಿಯಲ್ಲಿ ಜನ ಸಾಮಾನ್ಯವಾಗಿ ಮೋಸಹೋಗುತ್ತಾರೆ. ಖೋಟಾ ವಸ್ತುಗಳ ಆಧಿಕ್ಯತದಿಂದಾಗಿ ಸಾಚಾ ವಸ್ತುಗಳ ಬಗೆಗೇ ಸಂದೇಹ ಮೂಡುತ್ತದೆ. ಪ್ರತಿಯೊಂದು ವಸ್ತುವಿನಲ್ಲೂ ಕಲಬೆರಕೆ ಕಂಡುಬರುತ್ತದೆ.

ಯುರೋಪಿನಲ್ಲಿ - ಅದರಲ್ಲೂ ಮುಖ್ಯವಾಗಿ ಇಟಲಿಯಲ್ಲಿ ಕಲಾಕೃತಿಗಳ ಮಾರಾಟದಲ್ಲಿ ದೊಡ್ಡ ಪ್ರಮಾಣದ ವಂಚನೆ ನಡೆಯುತ್ತದೆ ಎಷ್ಟೋ ಕಲ ಖೋಟಾ ನೋಟುಗಳನ್ನು ಮಾರುಕಟ್ಟೆಯಲ್ಲಿ ಚಲಾಯಿಸಿ ಬಿಡುತ್ತಾರೆ.

ಈ ಅಂಗಡಿ ಗಿರಾಕಿಗಳನ್ನು ಮರೆ ಮೋಸಗಳಿಂದ ಪಾರುಮಾಡಲೆಂದು ಅಸ್ತಿತ್ವಕ್ಕೆ ಬಂತು. ಇಲ್ಲಿ ಗಿರಾಕಿಗಳಿಗೆ ಮರೆ ಮೋಸವಿಲ್ಲದ ಅಂಗಡಿಗಳ ವಿಳಾಸಗಳನ್ನೊದಗಿಸಲಾಗುತ್ತದೆ ಗಿರಾಕಿಗಳಿಗೆ ಅಂಥ ಅಂಗಡಿಗಳಲ್ಲಿ ಕೊಂಡ ವಸ್ತುಗಳು ತೃಪ್ತಿಕರ ಎನಿಸದಿದ್ದರೆ, ಅವರು ಮಾಡಿದ ಎಲ್ಲ ವೆಚ್ಚವನ್ನು ಮರಳಿಸಲಾಗುತ್ತದೆ. ಅಂದರೆ ಸಾಮಾನುಗಳ ಬೆಲೆ, ದಾರಿಖರ್ಚು ಎಲ್ಲವೂ ಅವರಿಗೆ ಸಿಗುತ್ತದೆ.

೧೯೭೩ರಲ್ಲಿ ಪ್ರಾರಂಭವಾದ ಈ ಅಂಗಡಿ ಒಂದು ವರ್ಷದೊಳಗೇ 20 ಸಾವಿರಕ್ಕಿಂತಲೂ ಹೆಚ್ಚು ಗಿರಾಕಿಗಳನ್ನು ಹೊಂದಿತು. ಅವರೆಲ್ಲರೂ ಮೊದಲು ಈ ಅಂಗಡಿಯ ಸಲಹೆ ಪಡೆದರು ಕಾನೂನು ಕೊಳ್ಳುವುದಕ್ಕಷ್ಟೇ ಅಲ್ಲ– ನೀರು; ವಿದ್ಯುತ್, ಟೆಲಿಫೋನು, ಮಕ್ಕಳ ಶಾಲಾಫೀಜು ಕೊಡುವಿಕೆ ಮೊದಲಾದ ದೈನಂದಿನದ ಸಮಸ್ಯೆಗಳಲ್ಲೂ ಜನ ಈ ಅಂಗಡಿಯ ನೆರವು ಪಡೆದಿದ್ದಾರೆ.

ಗಿರಾಕಿಗಳಿಗೆ ಈ ರೀತಿಯ ಸಲಹೆ ನೀಡಲು ಇವರು ಪಡೆಯುವ ಫೀ ಅತ್ಯಲ್ಪ. ಆದರೆ ಇವರು ಸೂಚಿಸುವ ಕಂಪನಿ, ಫರ್ಮ್ ಅಥವಾ ವ್ಯಾಪಾರಿ ಸಂಸ್ಥೆಗಳಿಂದ ಇವರು ಸಾಕಷ್ಟು ಕಮಿಶನ್ ಪಡೆಯುತ್ತಾರೆ. "ಲಂಡನ್ ಟೈಮ್ಸ್' ದಪ್ರತಿನಿಧಿ ಈ 30 ಸಾವಿರ ಗಿರಾಕಿಗಳ ಪೈಕಿ 100 ಗಿರಾಕಿಗಳನ್ನಾರಿಸಿ ಅವರ ಅನುಭವಗಳನ್ನು ಕೇಳಿದ. ಪ್ರತಿಯೊಬ್ಬನೂ ಈ ಅಂಗಡಿಯ ಸಲಹೆಯಿಂದ ತೃಪ್ತನಾಗಿದ್ದನೆಂದು ತಿಳಿದು ಬಂತು. ಈ ಏಜೆನ್ಸಿಯ ಮೂಲಕ ಎಷ್ಟೋ ವ್ಯಾಪಾರಿ ಸಂಸ್ಥೆಗಳ ಸಾಮಾನುಗಳ ಮಾದರಿಯನ್ನು ನೋಡುವ ಅವಕಾಶ ದೊರೆಯುತ್ತದೆ. ಇದು ನಿಜಕ್ಕೂ ಲಾಭದಾಯಕ.

ಕಟ್ಟಕಡೆಗೆ ಈ ಅಂಗಡಿಯ ಸಂಪರ್ಕ ಪಡೆಯುವ ಗಿರಾಕಿಗಳ ಸಮಸ್ಯೆಗಳ ಕೆಲ ಉದಾಹರಣೆಗಳನ್ನೂ ನೋಡಿರಿ.

“ನನ್ನ ಸೋದರ ರಷ್ಯಕ್ಕೆ ಹೋಗಿದ್ದಾನೆ. ಇಂದು ಅವನು ಸತ್ತಿದ್ದಾನೆಂದು ತಂತಿ ಬಂದಿದೆ. ನಾನೇನು ಮಾಡಲಿ,

“ನನ್ನ ಭಾರತೀಯ ಪತಿ ನನಗೆ ವಿಚ್ಛೇದನವಿತ್ತು ನನ್ನ ಮಗುವಿನೊಂದಿಗೆ ಬಹುಶಃ ಭಾರತಕ್ಕೆ ಹೋಗಿ:ಬೇಕು. ನಾನು ನನ್ನ ಮಗ:ವನ್ನೆಂತು ಪಡೆಯಲಿ! .

“ನಾನೊಂದು ರೇಶ್ಮೆ ಜಮುಖಾನೆ ಕೊಳ್ಳಬೇಕಾಗಿದೆ. ನ್ಯಾಯವಾದ ಬೆಲೆಗೆ ಅಂತಹ ಈ ಕಾಸೀ ಜಮುಖಾನೆ ಎಲ್ಲಿ ಸಿಗುವುದು ?

ಈ ಬೂಟ್‌ನ್ನು ನಾನು ‘ಬರ್ನ್ ಫುಟ್‌ವೇರ್’ ದಿ:ದ ಕೊಂಡಿರುವೆ. ಮರುದಿನವೇ ಹರಿದುಹೋಯಿತು. ಫರ್ಮ ಇದನ್ನು ವ ಪಾಸು ತೆಗೆದುಕೊಳ್ಳುತ್ತಿಲ್ಲ. ಏನು ಮಾಡಲಿ ?

“ನಾನು ರೆಡಿಮೇಡ್ ಬಟ್ಟೆ (ಸಿದ್ಧಉಡುಪು) ಗಳನ್ನು ರಪ್ತು ಮಾಡಬಯಸುತ್ತೇನೆ. ಯಾವ ದೇಶವನ್ನು ನಂಬಹುದು ?

“ನಾನು ವಿಮಾನ ನಿರ್ಮಾಣದ ದೊಡ್ಡ ಕಾರ್ಖಾನೆ ತೆರೆಯಬೇಕೆಂದಿರುವೆ ನನ್ನ ಬಳಿ ಸಾಕಷ್ಟು ಬಂಡವಾಳವಿದೆ. ಆದರೆ ಈ ಬಗ್ಗೆ ಏನು ಮಾಡಬೇಕೆಂದು ನಾನರಿಯೆ ” ?

“ನಾನು ಇತ್ತೀಚೆಗೆ ಭಾರತದಿಂದ ಮರಳಿದ್ದೇನೆ. ನನ್ನ ಮನೆಗೆ ಫೋನ್ ಹಾಕಿಸಿರಿ ?

“ನಾನು ಪಾಕಿಸ್ಥಾನದಿಂದ ಬಂದಿರುವೆ. ಇಲ್ಲಿ ನೌಕರಿ ಮಾಡುತ್ತಿದ್ದೇನೆ. ನನಗೆ ಮನೆ, ಕಾರು, ಫರ್ನೀಚರ್, ಫೋನ್, ರೇಡಿಯೋ, ಟಿಲಿವಿಜನ್—ಮೊದಲಾದವನ್ನು ಕಂತುಗಳಲ್ಲಿ ಕೊಡಿಸಿರಿ ”

ಇಂಥ ಸಾವಿರಾರು ಪ್ರಶ್ನೆಗಳನ್ನು ಈ ಅಂಗಡಿ ಎದುರಿಸಬೇಕಾಗುತ್ತದೆ. ಆದರೆ ಯಾರೊಬ್ಬರೂ ನಿರಾಶರಾಗಿ ಮರಳುವುದಿಲ್ಲ !

(ಹಿಂದಿಯಿಂದ)

# ನಾರಿಗೆ

ಶ್ರೀಮತಿ ಮಂದಾಕಿನೀದೇವಿ,
ಜೀವನಜ್ಯೋತಿ, ಕಲ್ಯಾಣನಗರ, ಧಾರವಾಡ-580007

ಮುನ್ನಡೆದು ನೀ ನಾರಿ ಬರಬಾರದೆ?
ಈರೆರಡು ಗೋಡೆಗಳ ಬಿಡಬಾರದೆ?
ಮನ-ಬಂಧ ತಡೆದಡಿಯು ಇಡಬಾರದೆ?
ಮನೆಯಿಂದ ಯುಗದೆಡೆಗೆ ನಡೆ ಬಾರದೆ?........

ಪತಿ ನಿನ್ನ ಪಥ-ಬೆಳಕಿನಂತಾಗಿದೆ
ಸತಿಗೆ ಯುಗ-ಹಿತ ಬೇಡದಂತಾಗಿದೆ
ಪತಿ ಪ್ರೇಮವೇ ಕ್ಷೇಮವೆಂತಾಗಿದೆ
ಕೃತಯುಗದ ಸ್ಥಿತಿ ಕಾಣದಂತಾಗಿದೆ........

ಶಿಶು ನಿನ್ನದೊಂದಲ್ಲ ಸಂಸಾರಕೆ
ಕೃಶದೇಹಿ ಶಿಶು ಕೋಜ-ಕೂಸಾಗಿದೆ?
ಜನ 'ಜಗದ ಜನನಿ' ಎಂದಿಹರೇತಕೆ?
ಮನ ನಲುಮೆ-ಒಲುಮೆ ಹೊಂದಿಹುದೇತಕೆ?........

ನಿನ್ನ ಪತಿ ಪರಮೇಶನೆಂತಾಗಿದೆ
ನಿನ್ನ ಚ್ಯುತಿ ಕೈಲಾಸದಂತಾಗಿದೆ
ಪತಿಯು ಪತಿ ಜಗಪತಿಯು ಮರೆವಾಗಿದೆ
ಪತಿ ಸಹಿತ ಮುಕುತಿಯದು ಹೊರೆಯಾಗಿದೆ........

ನಿನ್ನದೆನ್ನಲು ಧರ್ಮಕದ ಸಲ್ಲದು
ನಿನ್ನತನ ಜನಗಣಕೆ ಬಾ ಸಲ್ಲಿಸು
ಯುಗಪತಿಯು ಮನ ಸುಳಿವ ಮನೆ ಆವುದು?.......
ಯುಗ-ಪಥಿಕರಲಿ ನಿನ್ನ ಪಥವಾವುದು?

ಛಲವಾದ ಹಟಮಾರಿಯೆಂತಾಗಿದೆ
ಹಟಮಾರಿತನ ಕುಹಕದಿಂದಾಗಿದೆ
ಕಟು ಜೀವನವು ಕಪಟದಿಂದಾಗಿದೆ
ವಿಕರಾಳ ಕರ್ಮ ನಿನ್ನನ್ನು ನುಂಗಿದೆ!........

ನಸೆ-ಮೋಹಗಳ ರಕ್ಷಕಳು ಆಗಿಹೆ
ನಸು ನಗುತ ಮನೆ ಶುನಕ ನೀನಾಗಿಹೆ
ರಸದೂಟ ಸುಖಭೋಗ ಶುಲಕಾಗಿದೆ
ಕಸಿಕೂಟವದು ನಿನಗೆ ಹುಲುಸಾಗಿದೆ........
ಕೈಂಕರ್ಯ-ಸೇವೆ ಅತಿ ಮೊನಚಾಗಿದೆ
ಶಂಕರನ ಮನೆ ನಿನ್ನ ಮನಸಾಗಿದೆ
ಅಂತು ಗತಿಗೇಡಿ ಮನ ಮುನಿಸಾಗಿದೆ
ಭ್ರಾಂತಿ ಬಿಡು ಬಾ ಮುಂದೆ ಸೊಗಸಾಗಿದೆ!........
ಚಿರವಲ್ಲವದು ದೇಹ-ವ್ಯಾಮೋಹವು
ಸ್ಥಿರವಲ್ಲವದು ಸಿರಿಯ ಸುಖ-ಭೋಗವು
ಚಿರವಾಗೆ ಚಿತ್ತ-ಭಿತ್ತಿ ಲಕ್ಷವು
ಪರಮಾತ್ಮ ಪರಮಪತಿ ಚಿರಸಾಕ್ಷವು........
ಹುನೆ ಧರ್ಮದಂಗಾರದಲ್ಲಿ ಬೆಂದಿಹೆ !
ಹುನೆ ಚರ್ಮಸಿಂಗಾರದಲಿ ಮಿಂದಿಹೆ !
ಮಸೆದಾಲಗದ ಮೇಲೆ ಸುಖ ಸೊಂಕುದೆ ?
ಸದೆ ತುಂಬಿದಾಲಾಪ ಇಂಪಾದುದೆ ?........
ನಾರಿ ನಿನ್ನ ಧೀರತನವೇನಾಯಿತು ?
ನಾರಿ ನಿನ್ನ ವೀರರಸವೇನಾಯಿತು ?
ನಾರಿ ನಿನ್ನ ಹಿರಿಮೆಯದು ಏನಾಯಿತು ?
ನಾರಿ ನಿನ್ನ ಗರಿಮೆಯದು ಏನಾಯಿತು ?
ಜ್ಞಾನವದು ಹೀನತನ ಕೀಡಾಯಿತು !
ಪ್ರಾಣಪಣ ಹೇಡಿತನಕೀಡಾಯಿತು !
ದಾನಿತನ ಡಾಂಭಿಕದ ತಾಣಾಯಿತು !
ನಾರಿ, ನಿನ್ನ ಮೌಲ್ಯ ಕಾಂಬಾಣಾಯಿತು !........
ನಿನ್ನ ಲೋಚನ ಜ್ಯೋತಿಯಿಂ ಬೆಳಗಲಿ
ನಿನ್ನ ವಚನವು ಜ್ಞಾನದಿಂ ಮೊಳಗಲಿ
ನಿನ್ನ ರೂಪವು ತೇಜವಂ ತಳೆಯಲಿ
ನಿನ್ನ ಮನದೊಳು ಸಾಹಸಂ ಮೊಳೆಯಲಿ
ಧರ್ಮ ಶೋಧಕ ನಿನ್ನ ಮನಸಾಗಲಿ
ಧರ್ಮ-ಸಾಧಕ ನಿನ್ನ ಕಣಸಾಗಲಿ
ಕರ್ಮ-ರತ ಧರ್ಮ-ಪಥ ನಿನ್ನದಾಗಲಿ
ನಿನ್ನ ಪಥ ಪರಮ ಧರ್ಮವು ಸೇರಲಿ.

## ಬೇವು-ಒಂದು ಪ್ರಾಕೃತಿಕ ಕೀಟನಾಶಕ

ಹೈದರಾಬಾದ್‌ನಲ್ಲಿ ಪ್ರಯೋಗಶಾಲೆಯೊಂದರಲ್ಲಿ ವಿಜ್ಞಾನಿಗಳು ಬೇವಿನಿಂದ ಸುರಕ್ಷಿತವಾದ ಪ್ರಾಕೃತಿಕ ಕೀಟನಾಶಕವೊಂದನ್ನು ರೂಪಿಸಿದ್ದಾರೆ.. ಇದರ ಹೆಸರು "ವೈಪಾಸಾಯ್ಡ್" ಎಂದು. ಇದನ್ನು ಸಸ್ಯಗಳಿಗೆ ವಿಶೇಷತಃ ತರಕಾರಿ ಹಾಗೂ ಹಣ್ಣಿನ ಗಿಡಗಳಿಗೆ ಬೀಳುವ ಕ್ರಿಮಿ-ಕೀಟಗಳನ್ನು ನಿಯಂತ್ರಿಸಲು ಸುರಕ್ಷಿತವಾಗಿ ಬಳಸಬಹುದಾಗಿದೆ. ಇದರಲ್ಲಿ ರಸಾಯನಿಕ ಕೀಟನಾಶಕಗಳಲ್ಲಿರುವ ಮಾನವನಿಗೆ ಹಾನಿಯನ್ನುಂಟುಮಾಡುವ ನಂಜು ಪದಾರ್ಥಗಳು ಇರುವುದಿಲ್ಲ.

ಈ ಕೀಟನಾಶಕ ಬಿಳಿಯ ಹುಳು, ಕಾಯಿ-ಹಣ್ಣು ಕೊರೆಯುವ ಹುಳು, ಹೊಗೆಸೊಪ್ಪಿನ ಕಂಬಳಿಹುಳು, ಓರಿಯಂಟಲ್ ಆರ್ಮಿಹುಳುಗಳನ್ನು ಪ್ರಭಾವ ಯುತವಾಗಿ ನಿಯಂತ್ರಿಸಬಲ್ಲದು. ಈ ಔಷಧಿಯಿಂದ ಹುಳುಗಳು ಸಾಯುವುದಿಲ್ಲ ವಾದರೂ ಇವು ಸಸ್ಯ ಬೆಳೆಗಳಿಗೆ ಹಾನಿಯನ್ನುಂಟುಮಾಡುವ ಸಾಧ್ಯವಾಗುವುದಿಲ್ಲ ಹೀಗಾಗಿ ತಾವಾಗಿಯೆ ಇವು ಸತ್ತುಹೋಗುತ್ತವೆ.

ಹೈದರಾಬಾದ್‌ನ ಪ್ರಾದೇಶಿಕ ಸಂಶೋಧನಾ ಪ್ರಯೋಗಶಾಲೆಯ ಹೇಳಿಕೆಯ ಪ್ರಕಾರ ಈ ಕೀಟನಾಶಕ ಇನ್ನೂ ಪ್ರಯೋಗದ ಹಂತದಲ್ಲಿದೆ. ಇದು ಮಾರುಕಟ್ಟೆಗೆ ಬರುವ ದಿನಗಳು ದೂರವಿಲ್ಲ.

ಬೇವು ಬರ್ಮಾ, ಭಾರತ, ಮಲಯಾ ಹಾಗೂ ಶ್ರೀಲಂಕಾದ ಸ್ಥಳೀಯ ವೃಕ್ಷವಾಗಿದೆ. ಇದನ್ನು ಇತ್ತೀಚೆಗೆ ಇಂಡೋನೇಶಿಯ; ಥಾಯ್‌ಲೇಂಡ್ ಹಾಗೂ ಟೊಗೊ ದೇಶಗಳಲ್ಲೂ ಬೆಳೆಸಲಾಗುತ್ತಿದೆ. ಫಿಲಿಪ್ಪೈನ್ಸ್-ಜರ್ಮನಿ ಈ ಸಂಯುಕ್ತ ಕೃಷಿ ಸಂರಕ್ಷಣ ಕಾರ್ಯಕ್ರಮದ ಅಂಗವಾಗಿ ಬೇವನ್ನು ೧೯೮೨ ರಿಂದ ಫಿಲಿಫೈನ್ಸ್‌ನಲ್ಲಿ ವ್ಯಾಪಕವಾಗಿ ಬೆಳೆಸಲಾಗುತ್ತಿದೆ. ಇದರ ಔಷಧೀಯ ಗುಣಗಳನ್ನು ನಾವು ಆದಷ್ಟು ಬೇಗ ಬಳಸಿಕೊಂಡು ಸದುಪಯೋಗ ಪಡಿಸಿಕೊಳ್ಳಬೇಕಾಗಿದೆ.

### ಮೂಲಂಗಿ - ಉತ್ತಮ ತರಕಾರಿ

ಮೂಲಂಗಿಯ ಎಲ್ಲಾ ಭಾಗಗಳೂ ಉಪಯುಕ್ತ. ಇದು ಹಸಿವನ್ನು ಹೆಚ್ಚಿಸುವ, ರಕ್ತಶುದ್ಧಿ ಮಾಡುವ, ಅಪಾನ ವಾಯು ನಿವಾರಕ, ಹೃದಯಹಾಗೂ ಪಿತ್ತಜನಕಾಂಗಗಳಿಗೆ ಉಪಯುಕ್ತವೆನಿಸಿದೆ. ಹೋಮಿಯೋಪತಿಯಲ್ಲಿ ತಲೆನೋವು, ನಿದ್ರಾಹೀನತೆ, ಅತಿಸಾರ ಮುಂತಾದ ರೋಗಗಳಿಗೆ ಮೂಲಂಗಿ ಅಂಶವುಳ್ಳ ಔಷಧಿಯನ್ನು ಬಳಸಲಾಗುತ್ತದೆ. ಮೂಲಂಗಿ ಹಾಗೂ ಇದರ ಎಲೆಗಳು ಮೂತ್ರ ವರ್ಧಕ. ಇದರಲ್ಲಿ ಸಿ ಅನ್ನಾಂಗ, ವಿವಿಧ ಖನಿಜಾಂಶಗಳು ಹೇರಳವಾಗಿವೆ; ಕಬ್ಬಿಣದ ಅಂಶ, ಎ ಅನ್ನಾಂಗ ರಿಬೋಫ್ಲೇವಿನ್, ನಿಕೋಟಿನಿಕ್ ಆಮ್ಲಗಳೂ ಇವೆ.

ಮೂಲಂಗಿಯಿಂದ ಉತ್ತಮ ರಸವನ್ನು ತಯಾರಿಸಬಹುದು. ಮೂಲಂ ಯನ್ನು ಚೆನ್ನಾಗಿ ತೊಳೆದು, ತುರಿದು ಶುದ್ಧವಾದ ತೆಳುವಾದ ಬಟ್ಟೆಯಲ್ಲಿ ಹಾ ಹಿಸುಕಿ ರಸವನ್ನು ತೆಗೆಯಬೇಕು. ಹತ್ತು ಕಿಲೋ ರಸಕ್ಕೆ 20 ಗ್ರಾಂ ಸೈಟ್ರಿಕ್ ಆಮ್ಲ, 20 ಗ್ರಾಂ ಉಪ್ಪು, 600 ಗ್ರಾಂ ಸಕ್ಕರೆ ಬೆರೆಸಿ ಸುಮಾರಾಗಿ ಕಾಯಿ ಪಾಕ ತಯಾರಿಸಿ ಬಟ್ಟೆಯಲ್ಲಿ ಸೋಸಿ ಮತ್ತೆ ಕಾಯಿಸಬೇಕು. 90° ಶಾಖ ವರೆಗೆ ಕಾಯಿಸಿ ಕ್ರಿಮಿ ಶುದ್ಧೀಕರಿಸಿದ ಬಾಟ್ಲಿಗಳಿಗೆ ತುಂಬಿ ಕಾರ್ಕ್ ಹಾ ಭದ್ರಗೊಳಿಸಬೇಕು. ಬಳಿಕ 60° ಶಾಖವಿರುವ ನೀರಿನಲ್ಲಿ ಈ ಬಾಟ್ಲಿಗಳನ 10 ನಿಮಿಷಗಳ ವರೆಗೆ ಮುಳುಗಿಸಿಟ್ಟು ತೆಗೆದು ಗಾಳಿಯಲ್ಲಿ ಒಣಗಿಸಿ ಸಂಗ್ರ ಸಿಡಬೇಕು. ಇದನ್ನು ಒಂದು ವರ್ಷದವರೆಗೂ ಇಡಬಹುದು.

ರಸ ಹಿಂಡಿದ ಬಳಿಕ ಉಳಿದ ಚರಟವನ್ನು ಹಿಟ್ಟಿಗೆ ಬೆರೆಸಿ ರೊಟ್ಟಿ ತಯ ರಿಸಬಹುದು. ಮೂಲಂಗಿ ಸೊಪ್ಪಿನಿಂದಲೂ ಪಲ್ಯ ತಯಾರಿಸಬಹುದು, ಸಲಾ ರೂಪದಲ್ಲಿ ತಿನ್ನಬಹುದು. ಈ ಸೊಪ್ಪು ಮತ್ತು ಹೂವಿನಲ್ಲೂ ಮೇಲೆ ತಿಳಿಸಿ ಖನಿಜಾಂಶಗಳೂ, ಅನ್ನಸತ್ವಗಳಿವೆ. ಪ್ರೋಟೀನ್ ಅಂಶ ಸೊಪ್ಪು ಹಾಗ ಹೂವಿನಲ್ಲೇ ಜಾಸ್ತಿ.

### ೪. ಮೆಣಸಿನ ಕಾಯಿಯ ಹೊಸ ತಳಿಗಳು

ಬೆಂಗಳೂರಿನ ಭಾರತೀಯ ತೋಟಗಾರಿಕಾ ಬೆಳೆಗಳ ಸಂಶೋಧನಾ ಸಂಸ್ಥೆ ಸೆಲೆಕ್ಷನ್-೨ ಎಂಬ ಮೆಣಸಿನಕಾಯಿ ತಳಿಯನ್ನು ರೂಪಿಸಿದೆ. ಇದು ೧೫೦ ದಿನಗ ಕುಯಿಲಿಗೆ ಬಂದು ಹೆ/ಳ ರಿಂದ ೫ ಟನ್ ಒಣ ಮೆಣಸಿನ ಕಾಯಿ ಇಳುವರಿ ನೀ ಬಲ್ಲದು.

ಜವಹರ್‌ಲಾಲ್ ನೆಹರು ವಿಶ್ವ ವಿದ್ಯಾಲಯವು ‹ ಜವಹರ್ ಮಿರ್ಚ್-೨ ಎಂಬ ತಳಿಯನ್ನು ರೂಪಿಸಿದ್ದು, ಏಳುವರೆ ಟನ್ ಇಳುವರಿ ನೀಡಬಲ್ಲದು: ಒಣಗಿ ದಾಗ ಹೆ/ ಎರಡೂವರೆ ಟನ್‌ಗಿಂತ ಹೆಚ್ಚು ಮೆಣಸಿನ ಕಾಯಿ ಲಭ್ಯವಾಗುತ್ತ ಇವೆರಡೂ ತಳಿಗಳನ್ನು ದೇಶದ ವಿವಿಧ ಪ್ರದೇಶಲ್ಲಿ ಬೆಳೆಯಬಹುದು. (ಐ.ಸಿ.ಎ.ಆ

### ೫. ರಾಷ್ಟ್ರೀಯ ಕಳೆ ವಿಜ್ಞಾನ ಕೇಂದ್ರ

ಹಿಂದೆ ಕಳೆ ಸಸ್ಯಗಳು ಸಮಸ್ಯೆಯಾಗಿರಲಿಲ್ಲ. ಜನಸಂಖ್ಯೆ ಹೆಚ್ಚಾದಂತೆ ದ ಧಾನ್ಯಗಳನ್ನು ಬೆಳೆಸಲು ಕೃಷಿಪ್ರದೇಶ ವಿಸ್ತರಿಸಿದಂತೆ ಬೆಳೆಗೆ ಬೀಳುವ ಕಳೆಗಳ ನಿಯಂತ್ರಿಸುವುದು ಅನಿವಾರ್ಯವಾಯಿತು. ಇಂದು ನಾವು ಬಹುತೇಕ ಕಳೆಗಳ ನಿಯಂತ್ರಿಸಿದ್ದೇವೆ. ಕಾಂಗ್ರೆಸ್ ಕಳೆ ಎಂದು ಕರೆಯಲಾಗುವ ಪಾರ್ಥೇನಿ

ಅನ್ನು ನಿಯಂತ್ರಿಸಲು ಇನ್ನೂ ಸಾಧ್ಯವಾಗಿಲ್ಲ. ಜೈವಿಕ ವಿಧಾನಗಳಿಂದ ಇದನ್ನು ನಿಯಂತ್ರಿಸ ಬಹುದೆಂದು ತಿಳಿದು ಬಂದಿದೆ. ಸಾರ್ವಜನಿಕ ಚಳುವಳಿಯಂತೆ ಈ ಕಳೆ-ಯ ನಿಯಂತ್ರಣ ಕಾರ್ಯ ಸಾಧ್ಯವಾದರೆ ಇದನ್ನು ನಿಯಂತ್ರಿಸ ಬಹುದಾಗಿದೆ. ಸರ್ಕಾರ, ಇಲಾಖೆಗಳು, ಸಂಘ ಸಂಸ್ಥೆಗಳು, ಪಂಚಾಯಿತಿಗಳು ಈ ಕಾರ್ಯವನ್ನು ಕೈಗೆತ್ತಿಕೊಳ್ಳಬಹುದು. ಕಳೆ ನಿಯಂತ್ರಣದ ಸಮಸ್ಯೆಗಳ ಅಧ್ಯಯನ ಹಾಗೂ ಪರಿಹಾರೋಪಾಯಗಳನ್ನು ಸೂಚಿಸಲು ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಯು ಜಬಲ್‌ಪುರದಲ್ಲಿನ ಜವಹರ್‌ಲಾಲ್ ಕೃಷಿ ವಿಶ್ವವಿದ್ಯಾಲಯದಲ್ಲಿ ರಾಷ್ಟ್ರೀಯ ಕಳೆ ವಿಜ್ಞಾನ ಕೇಂದ್ರವೊಂದನ್ನು ಇತ್ತೀಚೆಗೆ ಸ್ಥಾಪಿಸಿದೆ. ಇಂದು ನಮ್ಮ ದೇಶದಲ್ಲಿ ಬೆಳೆಗಳಲ್ಲಿ ಶೇ ೧೦ ರಷ್ಟು ಪ್ರದೇಶ ಕಳೆಯಿಂದ ಆವರಿಸಿದೆ ಎಂಬುದನ್ನು ನಾವು ಮರೆಯಬಾರದು.

---

## "ಶಿಕ್ಷಣ"

ಎಂ. ಆರ್. ಜೈಲಪ್ಪ, ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ.

ಕುಳಿತಿದ್ದೆ ನಾನು ಏಕಾಂಗಿಯಲಿ ಯೋಚನೆಮಾಡುತ
ಮಾನವ ಮಾನವನಾಗುವ ಬಗೆ ಹೇಗೆಂದು ಚಿಂತಿಸುತ
ಉಪಯೋಗವಾಗಿದೆ ವಿಜ್ಞಾನದಿಂ ಸಂಶಯವಿಲ್ಲದೆ
ಕಾಣುತಿದೆ ಒಂದು ಮುಖ್ಯ ಕೊರತೆ ಅನುಮಾನವಿಲ್ಲದೆ
ನೆಮ್ಮದಿ ಇಲ್ಲವೀ ಆಧುನಿಕ ಜೀವನದಿ
ಸಮಯ ವ್ಯರ್ಥವಾಗುತಿದೆ ನಮ್ಮ ಜೀವನದಿ
ಮಾನವತೆ ಇಲ್ಲದ ಜೀವನ ಕಾಣುತಿದೆ
ಮಾನವಗೆ ಮಾನವೀಯತೆ ಕಲಿಸುವ
ಶಿಕ್ಷಣ ಅಗತ್ಯವೀ ಎಮಗೆ.

# ಭವಿಷ್ಯಕ್ಕಾಗಿ ಆಹಾರ

ಜಿ. ಆರ್. ರಂಗಸ್ವಾಮಯ್ಯ. ಭಾರತೀಯ ಕೃಷಿ ಸಂಶೋಧನ ಸಂಸ್ಥೆ, ಹೊಸದೆಹಲಿ - 1.

ವಿಶ್ವಾದ್ಯಂತ ಅಕ್ಟೋಬರ್ ೧೬ ರಂದು ವಿಶ್ವ ಆಹಾರ ದಿನವನ್ನು ಆಚರಿಸಲಾಗುತ್ತದೆ. "ಭವಿಷ್ಯಕ್ಕಾಗಿ ಆಹಾರ" ಎಂಬುದು ಈ ವರ್ಷದ ವಿಷಯುವಾಗಿದೆ. ವಿಶ್ವ ಆಹಾರ ಸಮಸ್ಯೆ ಇದನ್ನು ಬಗೆಹರಿಸಲು ಕೈಗೊಳ್ಳಬೇಕಾದ ಕ್ರಮಗಳು, ಬಡತನ, ಹಸಿವು ಹಾಗೂ ನ್ಯೂನ ಪೋಷಣೆಯನ್ನು ನಿವಾರಿಸುವಲ್ಲಿ ವಿಶ್ವದ ಸರ್ಕಾರಗಳು, ಸಂಘ ಸಂಸ್ಥೆಗಳು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಸಾರ್ವಜನಿಕ ಜನಜಾಗೃತಿ ಮಾಡುವ ಬಗ್ಗೆ ಈ ವರ್ಷ ವಿಶ್ವ ಆಹಾರ ಹಾಗೂ ಕೃಷಿ ಸಂಸ್ಥೆಯು ಗಮನ ಸೆಳೆದಿದೆ.

ವಿಶ್ವದಲ್ಲಿ ಈ ವರ್ಷ ಸುಮಾರು ೫೧ ದಶಲಕ್ಷ ಜನರು ಸಾಯುತ್ತಾರೆ. ಇವರಲ್ಲಿ ಮೂರನೆ ಒಂದು ಭಾಗ ಹಸಿವಿನಿಂದ, ನ್ಯೂನ ಪೋಷಣೆಯಿಂದ ಆರೋಗ್ಯಕರ ಜೀವನ ನಡೆಸಲಾಗದೆ ಸಾಯುತ್ತಾರೆ ಒಂದು ಅಂದಾಜಿನ ಪ್ರಕಾರ ವಿಶ್ವದಲ್ಲಿ ೫೦ ಕೋಟಿ ಜನರಿಗೆ ಸರಿಯಾದ ಆಹಾರ ಇಲ್ಲವಾಗಿದೆ. ಇದರಲ್ಲಿ ಬಹುಪಾಲು ಹಳ್ಳಿಗಾಡಿನಲ್ಲಿರುವಂಥವರು.

ವಿಶ್ವದಲ್ಲಿ ಪ್ರತಿ ನಿಮಿಷಕ್ಕೂ ಯುದ್ಧೋಪಕರಣಗಳು ಎರಡು ದಶಲಕ್ಷ ಅಮೇರಿಕನ್ ಡಾಲರ್‌ಗಳನ್ನು ನುಂಗುತ್ತವೆ ಈ ಮೊತ್ತ ಅಭಿವೃದ್ಧಿಶೀಲ ದೇಶಗಳಲ್ಲೇ ಹೆಚ್ಚಾಗಿದೆ. ೧೯೬೦ ರಿಂದೀಚೆಗೆ ಸೇನಾ ರಂಗದ ಖರ್ಚು ಈ ದೇಶಗಳಲ್ಲಿ ದ್ವಿಗುಣಗೊಂಡಿದೆ ೧೯೮೮ ರ ಕೊನೆಯಲ್ಲಿ ತೃತೀಯ ವಿಶ್ವದ ಸಾಲದ ಮೊತ್ತ ೧, ೩೬೦ ಸಾವಿರ ದಶಲಕ್ಷ ಅಮೇರಿಕನ್ ಡಾಲರ್‌ಗಳಷ್ಟಿತ್ತು. ಅಂದರೆ ಅವರಿಗೆ ಬೇಕಾದ ಆಹಾರವನ್ನು ಆಮದು ಮಾಡಿಕೊಳ್ಳುವ ಚೈತನ್ಯ ಇಲ್ಲವಾಗಿದೆ ಪ್ರಾಕೃತಿಕ ಸಂಪನ್ಮೂಲಗಳನ್ನು ಮಿತಿಮೀರಿ ಬಳಸಿಕೊಳ್ಳದೆ ವಿಧಿಯಿಲ್ಲವಾಗಿದೆ. ಸಂಪನ್ಮೂಲಗಳ ಸಂರಕ್ಷಣೆ ಈ ದೇಶ ಶ್ರೀಮಂತಿಕೆ ಎನಿಸೀತು.

ಬರ್ಲಿನ್ ಗೋಡೆ ಕುಸಿಯುತ್ತಿರುವಾಗ ಉಳ್ಳವರು-ಇಲ್ಲದವರ ನಡುವಿನ ಗೋಡೆ ಮೇಲೇಳುತ್ತಿದೆ. ನಾವಿರುವ ಭೂಮಿಯನ್ನು ಈಗಾಗಲೇ ಮಿತಿಮೀರಿ ಬಳಸಿಕೊಂಡಿವೆ. ಮುಂದಿನ ಪೀಳಿಗೆಯ ಅಧಿಕಾರವನ್ನು ಕಿತ್ತುಕೊಳ್ಳುತ್ತಿದ್ದೇವೆ. ಓಜೋನ್ ಪದರ ಹರಿಯುತ್ತಿದೆ, ಜಲ, ವಾಯು ಮಾಲೀನ್ಯವಾಗಿದೆ, ರಾಸಾಯನಿಕ ನಂಜು ಪದಾರ್ಥಗಳು ಕೈಗಾರಿಕೀಕರಣದಿಂದಾಗಿ ಹೆಚ್ಚಿವೆ. ಈ ಶತಮಾನದಲ್ಲೆ ಈ ಮಾಲಿನ್ಯ ಐವತ್ತು ಪಟ್ಟು ಹೆಚ್ಚಿದೆ. ಅಭಿವೃದ್ಧಿಶೀಲ ದೇಶಗಳಲ್ಲಿ ಸರಿಯಾದ ಯೋಜನೆಗಳಿಲ್ಲದೆ ನೆಲ, ಜಲ ಹಾಳಾಗುತ್ತಾ ಹೋಗುತ್ತಿದೆ. ಕೇವಲ ಬದುಕಿ ಉಳಿಯುವುದಕ್ಕಾಗಿ ಗೇಣುದ್ದದ ಹೊಟ್ಟೆಗಾಗಿ ಇದೆಲ್ಲ ಆಗುತ್ತಿದೆ. ಮುಂದಿನ ಪೀಳಿಗೆಗೆ ಅನ್ಯಾಯವಾಗುತ್ತಿದೆ.

ಯೂರೋಪ್ ಒಂದರಲ್ಲೇ ೧೯೯ ದೇಶಿ ಜಾನುವಾರುಗಳಲ್ಲಿ ೯ ಕಾಣೆಯಾಗಿವೆ, ೪೪ ಅಪರೂಪವಾಗಿವೆ; ೨೪೦ ಕುದುರೆ, ದನ, ಹಂದಿ, ಕುರಿ ಹಾಗೂ ಮೇಕೆಯ ತಳಿಗಳು ಅಪಾಯದ ಹಂತದಲ್ಲಿವೆ. ಇದೇ ಪರಿಸ್ಥಿತಿ ಬಹಳಷ್ಟು ಸ್ಥಳೀಯ ದವಸ-ಧಾನ್ಯಗಳ ತಳಿಗಳದ್ದಾಗಿದೆ.

ಸಮಶೀತೋಷ್ಣ ವಲಯದ ಕಾಡುಗಳಲ್ಲಿ ೮೦,೦೦೦ ಜಾತಿಯ ಖಾದ್ಯ ಯೋಗ್ಯ ಮರ-ಗಿಡಗಳಲ್ಲಿ ಒಂದನ್ನು ಕೃಷಿ ಮಾಡುತ್ತಿಲ್ಲ. ಇವುಗಳಲ್ಲಿ ನೂರಾರು ತಳಿಗಳು ಅಪರೂಪವಾಗಿವೆ. ಒಂದು ಅಂದಾಜಿನ ಪ್ರಕಾರ ೧೯೮೦ ರಲ್ಲಿ ವರ್ಷಕ್ಕೆ ೧೧.೩ ದಶಲಕ್ಷ ಹೆಕ್ಟೇರ್ ಕಾಡುಗಳಲ್ಲಿ ಕಾಣೆಯಾಗುತ್ತಿದ್ದರೆ ೧೯೯೦ ರಲ್ಲಿ ೧೭ ದಶಲಕ್ಷ ಹೆಕ್ಟೇರುಗಳಷ್ಟು ಕಾಡುಗಳು ಕಾಣೆಯಾಗುತ್ತಿವೆ.

ಆಫ್ರಿಕಾದಲ್ಲಿ ಪ್ರತಿವರ್ಷ ೩೭,೦೦೦ ಚದುರ ಕಿ. ಮೀ, ಕಾಡುಗಳು ನಾಶವಾಗುತ್ತಿವೆ. ಮರುಭೂಮಿಗಳು ವಿಸ್ತರಿಸುತ್ತಿವೆ.

ಈ ಎಲ್ಲ ಎದೆಗೆಡಿಸುವ ಅಂಕಿ-ಅಂಶಗಳತ್ತ ವಿಶ್ವದ ಗಮನ ಸೆಳೆಯಲಾಗಿದೆ. ಭೂಮಿಯ ಸಂಪನ್ಮೂಲಗಳ ಸದುಪಯೋಗ ಆಗಬೇಕು. ಜನಜೀವನದ ಗುಣಮಟ್ಟವನ್ನು ಸುಧಾರಿಸಲು ಪರಿಸರವನ್ನು ಹದಗೆಡಿಸದಂತೆ ಇದನ್ನು ಬುದ್ಧಿವಂತಿಕೆಯಿಂದ ಬಳಸಿಕೊಳ್ಳಬೇಕು; ಮುಂದಿನ ಪೀಳಿಗೆಯ ಕ್ಷೇಮಕ್ಕಾದರೂ ನಾವು ಅರ್ಹರಾಗಬೇಕು. ಇವಕ್ಕಾಗಿ ಸರ್ಕಾರಗಳು, ಸಂಘ-ಸಂಸ್ಥೆಗಳು ನೈತಿಕ, ಸಾಮಾಜಿಕ ಹಾಗೂ ರಾಜಕೀಯ ಹೊಣೆಗಳನ್ನು ಹೊತ್ತು ಮುನ್ನಡೆಯಬೇಕು

---

## ಸಂತಾಪ

ದಿನಾಂಕ **15-3-91** ರಂದು ಶ್ರೀ ಸಿದ್ಧಗಂಗಾ ತಾಂತ್ರಿಕ ವಿದ್ಯಾಲಯ (ಎಸ್.ಐ.ಟಿ) ದಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಿದ್ದ ಮಾನ್ಯ ಶ್ರೀ ಜಿ, ಎಸ್. ಕುಮಾರಸ್ವಾಮಿಯವರು ಹೃದಯಾಘಾತದಿಂದ ನಿಧನರಾದುದನ್ನು ತಿಳಿದು 'ಸಿದ್ಧಗಂಗಾ' ಕ್ಕೆ ಅತೀವ ದುಃಖವಾಯಿತು. ಶ್ರೀಯುತರು ಎಸ್. ಐ. ಟಿಯ ಪ್ರಾಚಾರ್ಯರಾಗಿಯೂ ಸೇವೆ ಸಲ್ಲಿಸಿದ್ದರು. ಮೆಕ್ಯಾನಿಕಲ್ ಇಂಜನಿಯರಿಂಗ್ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತ, ಸ್ನೇಹಕ್ಕೆ, ವಿದ್ವತ್ತಿಗೆ, ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾಗಿದ್ದರು. ಶ್ರೀಯುತರು ಓರ್ವ ಪುತ್ರ, ಮತ್ತು ಈರ್ವರು ಪುತ್ರಿಯರು ಪತ್ನಿ ಹಾಗೂ ಅಪಾರ ಬಂಧುವರ್ಗದವರನ್ನು ಅಗಲಿದ್ದಾರೆ. ಅಗಲಿದ ಶ್ರೀಯುತರ ಆತ್ಮಕ್ಕೆ ಬಸವಾದಿ ಪ್ರಮಥರು ಶಾಂತಿಯನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತ, ದಿವಂಗತರ ಕುಟುಂಬ ವರ್ಗದವರಿಗೆ ದುಃಖವನ್ನು ಸಹಿಸುವ ಧೈರ್ಯವನ್ನು ನೀಡಲೆಂದು ಕೋರುತ್ತ 'ಸಿದ್ಧಗಂಗಾ' ಸಂತಾಪವನ್ನು ವ್ಯಕ್ತಪಡಿಸುತ್ತದೆ.

# ಸಿದ್ಧಗಂಗಾ ಮಾಸಿಕ ಪತ್ರಿಕೆಯ ಒಡೆತನ ಮತ್ತು

## ಇತರ ವಿವರಗಳ ಸಂಬಂಧಪಟ್ಟ ಮಾಹಿತಿ

ಫಾರಂ ೪

೧ ಪ್ರಕಟಣೆಯ ಸ್ಥಳ : ಶ್ರೀ ಸಿದ್ಧಗಂಗಾ ಮಠ
೨ ಪ್ರಕಟವಾಗುವ ಅವಧಿ : ಮಾಸಿಕ
೩ ಮುದ್ರಣ ಭಾಷೆ : ಕನ್ನಡ
೪ ಮುದ್ರಕರ ಹೆಸರು : ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ರಾಷ್ಟ್ರೀಯತೆ : ಭಾರತೀಯ
ವಿಳಾಸ : ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ (ಕರ್ನಾಟಕ)

೫ ಪ್ರಕಾಶಕರ ಹೆಸರು : ಹೆಚ್. ಬಿ. ಗಂಗಾಧರಯ್ಯ
ರಾಷ್ಟ್ರೀಯತೆ : ಭಾರತೀಯ
ವಿಳಾಸ : ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ (ಕರ್ನಾಟಕ)

೬ ಸಂಪಾದಕರು : ಶ್ರೀ ಪಂ|| ಚನ್ನಪ್ಪ ಎರೇಸೀಮೆ
ರಾಷ್ಟ್ರೀಯತೆ : ಭಾರತೀಯ
ವಿಳಾಸ : ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ (ಕರ್ನಾಟಕ)

೭ ಪತ್ರಿಕೆಯ ಮಾಲೀಕರು : ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲಾ (ಕರ್ನಾಟಕ)

೮ ನೊಂದಣಿ ಸಂಖ್ಯೆ : K. R. N. Q. ೯.

ನಾನು ಹೆಚ್. ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.

೧ ಮಾರ್ಚಿ 1991 (ಸಹಿ) ಹೆಚ್. ಬಿ. ಗಂಗಾಧರಯ್ಯ,
ಸಿದ್ಧಗಂಗಾ ಮಠ. ಪ್ರಕಾಶಕರು.

# ಸಿದ್ಧಗಂಗಾ ತಾಂತ್ರಿಕ ಕಾಲೇಜು ರಜತ ಮಹೋತ್ಸವ

ವರದಿ.- ಹೆಚ್. ಬಿ. ಗಂಗಾಧರಯ್ಯ

ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ತ್ರಿವಿಧ ದಾಸೋಹಮೂರ್ತಿಗಳು, ಘನ ವಿದ್ವಾಂಸರು ಮತ್ತು ಹೆಸರಾಂತ ಶಿಕ್ಷಣ ತಜ್ಞರು.

1963 ರಲ್ಲಿ ಸಿದ್ದಗಂಗಾ ತಾಂತ್ರಿಕ ಕಾಲೇಜು ಪ್ರಾರಂಭವಾಯಿತು. ಆಗ ಇಂಜನಿಯರಿಂಗ್ ಶಿಕ್ಷಣಕ್ಕೆ ಬೇಡಿಕೆ ಅಧಿಕವಾಗಿತ್ತು. ಇದು ಪಟ್ಟಣಪ್ರದೇಶದ ವಿದ್ಯಾರ್ಥಿಗಳಿಗೆ ಮಾತ್ರ ಲಭ್ಯವಾಗಿ ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳಿಗೆ ಅವಕಾಶ ವಿಲ್ಲದೆ ಹೋಗಿತ್ತು. ಈ ಅಸಮಾನತೆಯನ್ನು ನೀಗಲು ಜಿಲ್ಲಾಕೇಂದ್ರ ವಾದ ತುಮಕೂರಿನಲ್ಲಿ ಶ್ರೀ ಶ್ರೀ ಗಳವರು ಮೇಲಿನ ತಾಂತ್ರಿಕ ಕಾಲೇಜನ್ನು ತೆರೆಯಲು ಮುಂದಾದರು ಇದರ ಸರ್ವತೋಮುಖ ಬೆಳವಣಿಗೆಗೆ ಅನೇಕ ಉದಾರ ವ್ಯಕ್ತಿಗಳು ಮತ್ತು ಸಂಘ ಸಂಸ್ಥೆಗಳು ನೆರವಾಗಿವೆ, ಶ್ರೀ ಶ್ರೀ ಗಳವರ ಸ್ಫೂರ್ತಿ, ಆಶೀರ್ವಾದ, ದೂರದೃಷ್ಟಿ, ಅಸಾಧಾರಣ ಪ್ರತಿಭೆ, ಸಾಮರ್ಥ್ಯ ಉದಾರಭಾವನೆ ಕಠಿಣ ಪರಿಶ್ರಮದ ಫಲವಾಗಿ ಎಸ್.ಐ.ಟಿ. ಇಂದಿನ ಸ್ವರೂಪಕ್ಕೆ ಬೆಳೆದಿದೆ. ಇಡೀ ರಾಷ್ಟ್ರದಲ್ಲಿಯೇ ಪ್ರಥಮ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಒಂದು ಎಂದು ಶ್ಲಾಘನೆಗೆ ಪಾತ್ರವಾಗಿದೆ.

1980 ರಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಿಂದ ಪಡೆಯಲಾದ ಕಂಪ್ಯೂಟರೀಕರಣಗೊಳಿಸಿದ ಅಭಿಮತದ ಪ್ರಕಾರ ಎಸ್.ಐ.ಟಿ. ರಾಜ್ಯದ ಖಾಸಗಿ ವ್ಯವಸ್ಥಾಪನೆಯ ಅನುದಾನ ಪಡೆಯದ ಇಂಜನಿಯರಿಂಗ್ ಕಾಲೇಜುಗಳ ಪೈಕಿ ಅತ್ಯುತ್ತಮವಾದ ಕಾಲೇಜು ಎಂಬುದಾಗಿ ಸ್ಥಾನ ನಿರ್ಣಯ ಮಾಡಲಾಗಿದೆ. ಸಂಸ್ಥೆಯು 60 ಎಕರೆಗಳಿಗೂ ಹೆಚ್ಚು ವಿಸ್ತಾರವಾದ ಅಭಿವೃದ್ಧಿ ಹೊಂದಿದ ಕ್ಯಾಂಪಸ್ ಒಳಗೊಂಡಿದೆ, ಪರಿಶುದ್ಧವಾದ ಪ್ರಯೋಗಾಲಯಗಳು, ಕಾರ್ಯಾಗಾರಗಳು ಮತ್ತು ಗ್ರಂಥಾಲಯಗಳನ್ನು ಸಂಸ್ಥೆ ಹೊಂದಿದೆ. ಕಂಪ್ಯೂಟರ್ ಕೇಂದ್ರವು ವಿದ್ಯಾರ್ಥಿಗಳ ಅವಶ್ಯಕತೆಗಳನ್ನು ಪೂರೈಸಲು ಸುಸಜ್ಜಿತವಾಗಿದೆ. ಸ್ನಾತಕೋತ್ತರ ಶಿಕ್ಷಣವನ್ನು ಪ್ರಾರಂಭಿಸಲು ಪೂರಕ ಪ್ರಸ್ತಾವನೆಗಳು ಸಾಗುತ್ತಿವೆ. ಈ ದಿಸೆಯಲ್ಲಿ ಎ ಐ ಸಿ ಟಿ ಇ ನವದೆಹಲಿ, ಇವರ ಅಂಗೀಕಾರಕ್ಕಾಗಿ ಉತ್ಸುಕತೆಯಿಂದ ನಿರೀಕ್ಷಿಸುತ್ತಿದೆ. 25 ವರ್ಷಗಳ ವಿಶಿಷ್ಟ ಸೇವೆ ಮತ್ತು ನೆನಪಿಗಾಗಿ ಎಸ್.ಐ.ಟಿ. ತನ್ನ ಬೆಳ್ಳಿಹಬ್ಬವನ್ನು 1991 ಮಾರ್ಚ್ 1-2 ಆಚರಿಸಿತು.

ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ,

ಶಿಕ್ಷಣ ಆಜನ್ಮ ಸಿದ್ಧ ಹಕ್ಕು. ಇದರಿಂದ ವಂಚಿತರಾದವರಿಗೆ ಒದಗಿಸುವುದು ಮುಖ್ಯ ಕರ್ತವ್ಯ. ತಾಂತ್ರಿಕ ಜ್ಞಾನ ಮತ್ತು ಅನುಭವ ಸಮಾಜದ ಅಭಿವೃದ್ಧಿಗೆ ರಾಷ್ಟ್ರದ ಏಳಿಗೆಗೆ ಕಾರಣವಾಗಬೇಕೆಂದು ಹೇಳಿದರು.

ವಿದ್ಯಾವಂತರು' ವಿದ್ಯಾಹೀನರ ಉಳ್ಳವರ ಇಲ್ಲದವರ ನೆರವಿಗೆ, ಅವರ ಅಭಿವೃದ್ಧಿಗೆ ಶ್ರಮಿಸಿ ಸಮಾಜದ ಋಣವನ್ನು ಕೃತಜ್ಞತೆಯಿಂದ ಸಲ್ಲಿಸುವುದು ಆದ್ಯ ಕರ್ತವ್ಯ ಎಂದು ನುಡಿದ ಶ್ರೀಗಳು ಉತ್ತಮ ಶೀಲ, ಶಿಸ್ತು, ಸಂಯಮಗಳಿಲ್ಲದ ವಿದ್ಯೆ ರಾಷ್ಟ್ರ ಪ್ರೇಮವಿಲ್ಲದ ಬಾಳು ನಿರರ್ಥಕವೆಂದು ಜನತೆಯನ್ನು ಎಚ್ಚರಿಸಿದರಲ್ಲದೆ ನ್ಯಾಯಯುತ ಸೌಲಭ್ಯವಂಚಿತ ಬಡ ಜನರ ಮೇಲೆ ಉಳ್ಳವರ ಮುಖ್ಯ ಕರ್ತವ್ಯವೆಂದರು.

ದೇಶದ ತಾಂತ್ರಿಕ ಶಿಕ್ಷಣದ ಕೊರತೆಯನ್ನು ನೀಗಿಸಲು ದಿಟ್ಟ ಹೆಜ್ಜೆ ಇಟ್ಟ ಸಿದ್ಧಗಂಗಾ ಶ್ರೀ ಶ್ರೀ ಗಳವರು ತಾಂತ್ರಿಕ ಜ್ಞಾನದೊಂದಿಗೆ ಎಂಜನಿಯರುಗಳು ರಾಷ್ಟ್ರಭಕ್ತಿಯನ್ನು ತುಂಬಿ ರಾಷ್ಟ್ರದ ಉತ್ತಮ ರೂವಾರಿಗಳಾಗಲು ಪಟ್ಟ ಶ್ರಮ ಅತ್ಯಂತ ಶ್ಲಾಘನೀಯ ಎಂದು ರಾಜ್ಯದ ಶಿಕ್ಷಣ ಸಚಿವ ವೀರಪ್ಪಮೊಯ್ಲಿ ಅವರು ಹೇಳಿದರು.

ನಮ್ಮ ದೇಶ ತಾಂತ್ರಿಕತೆಯಲ್ಲಿ ವಿದೇಶಿ ಜ್ಞಾನವನ್ನು ಎರವಲು ಪಡೆಯುತ್ತಿರುವುದು ವಿಪರ್ಯಾಸ ಎಂದ ಅವರು ಈ ಲೋಪ ತುಂಬಲು ಸಿದ್ಧಗಂಗಾ ತಾಂತ್ರಿಕ ಕಾಲೇಜು ಶ್ರಮಿಸಬೇಕಾಗಿದೆ ಎಂದರು. ಉತ್ತಮ ತಾಂತ್ರಿಕ ಕಾಲೇಜುಗಳಿಗೆ ಸ್ವಾಯತ್ತತೆ ನೀಡಲು ಸರ್ಕಾರ ಆಲೋಚಿಸುತ್ತಿದ್ದು 'ಸಿದ್ಧಗಂಗಾ' ತಾಂತ್ರಿಕ ಕಾಲೇಜು ಸ್ವಾಯತ್ತತೆ ಪಡೆಯುವ ನಂಬಿಕೆ ತಮಗಿದೆ ಎಂದು ಮೊಯ್ಲಿ ನುಡಿದರು.

ಬೆಳ್ಳಿಹಬ್ಬದ ಸ್ಮರಣ ಸಂಚಿಕೆಯನ್ನು ಬಿಡುಗಡೆಮಾಡಿದ ಸಂಸತ್ ಸದಸ್ಯ ಬಸವರಾಜ ಪಾಟೀಲ್ ಅನ್ವರಿಯವರು ನಮ್ಮ ಯುವಕರಿಗೆ ಕೇವಲ ತಾಂತ್ರಿಕ ಶಿಕ್ಷಣ ನೀಡಿದರೆ ಸಾಲದು ಅವರು ಸ್ವಾವಲಂಬಿಗಳಾಗುವ ಶಿಕ್ಷಣ ನೀಡುವ ಅಗತ್ಯವಿದ್ದು ಇದು ಸರಕಾರದ ಹೊಣೆ ಮತ್ತು ಕರ್ತವ್ಯವೂ ಹೌದೆಂದರು.

ಕೇಂದ್ರದ ಮಾಜಿ ಸಚಿವರಾದ ಶ್ರೀ ಎಸ್. ಗುರುಪಾದಸ್ವಾಮಿ, ರಾಜ್ಯದ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗ್ಗಡೆ, ಶ್ರೀ ಎಸ್.ಆರ್. ಬೊಮ್ಮಾಯಿ ಕೃಷಿ ಮತ್ತು ತೋಟಗಾರಿಕೆ ಸಚಿವರಾದ ಶ್ರೀ ಜಿ. ಪುಟ್ಟಸ್ವಾಮಿಗೌಡ, ಮಾಜಿಸಚಿವರಾದ ಶ್ರೀ ಎಸ್. ರೇವಣ್ಣ, ಶ್ರೀ ಲಕ್ಷ್ಮಿನರಸಿಂಹಯ್ಯ, ಲೋಕಸಭಾ ಸದಸ್ಯರಾದ

ಶ್ರೀ ಜಿ. ಎಸ್. ಬಸವರಾಜು, ಶಾಸಕರಾದ ಶ್ರೀ ಶಫಿ ಅಹಮದ್, ವಿಧಾನಪರಿಷತ್ ಸದಸ್ಯರಾದ ಶ್ರೀ ಟಿ. ಹೆಚ್. ನಾರಾಯಣ ಸ್ವಾಮಿ ಮತ್ತು ಪುಣೆಯ ಭಾರತ್ ಪ್ರೋರ್ಜ್ ಸಂಸ್ಥೆಯ ಶ್ರೀ ನೀಲಕಾಂತ ಕಲ್ಯಾಣಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಡಾ|| ಶ್ರೀ ಕೆ. ಹನುಮಂತಪ್ಪ ವಹಿಸಿದ್ದರು.

ಸಮಾರೋಪ ಬಾಷಣ ಮಾಡಿದ ಮಾಜಿ ಮುಖ್ಯಮಂತ್ರಿ ಹಾಗೂ ಸಂಸತ್ ಸದಸ್ಯ ಶ್ರೀ ಆರ್. ಗುಂಡೂರಾವ್ ಪ್ರತಿಭಾ ಪಲಾಯನ ತಪ್ಪಬೇಕು ಎಂದರಲ್ಲದೆ ಈ ದೇಶದಲ್ಲಿ ದಕ್ಷತೆಯಿಂದ ಕೆಲಸ ಮಾಡುವವರಿಗೆ ಪ್ರತಿಫಲ ಸಿಗಬೇಕು ಎಂದು ಆಶಿಸಿದರು. ಉತ್ತಮ ಕೆಲಸ ಮಾಡುತ್ತಿರುವ ಸಿದ್ಧಗಂಗಾ ಶಿಕ್ಷಣ ಸಂಸ್ಥೆಗೆ ವೈದ್ಯಕೀಯ ಕಾಲೇಜು ನೀಡಬೇಕೆಂದು ಸರ್ಕಾರದ ಗಮನ ಸೆಳೆದರು.

ಈಗ ಕೊಲ್ಲಿಯುದ್ಧ ಮುಗಿದಿರುವುದರಿಂದ ಭಾರತದಲ್ಲಿ ಎಂಜಿನಿಯರ್‌ಗಳ ನಿರುದ್ಯೋಗ ಸಮಸ್ಯೆ ಪರಿಹಾರವಾಗುವುದೆಂದು ಚಟಾಕಿ ಹಾರಿಸಿದರು.

ಸಮಾರಂಭದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವೆ ಶ್ರೀಮತಿ ಕೆ. ಎಸ್. ನಾಗರತ್ನಮ್ಮನವರು ವಿದ್ಯಾರ್ಥಿನಿ ನಿಲಯದ ಸೌಲಭ್ಯ ಕೇಂದ್ರ ಕಟ್ಟಡದ ಶಂಕು ಸ್ಥಾಪನೆ ನೆರವೇರಿಸಿದರು.

ಕೊನೆಯಲ್ಲಿ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿ ವಿಜ್ಞಾನ ಧರ್ಮ ಎರಡೂ ಒಂದಕ್ಕೊಂದು ಪೂರಕವಾದರೆ ಭವಿಷ್ಯ ಆಶಾದಾಯಕವಾಗಿರುತ್ತದೆಂದು ಹೇಳಿದರು.

ವಿಜ್ಞಾನ ಮತ್ತು ತಂತ್ರಜ್ಞಾನದ ಮುನ್ನಡೆ ಮನುಕುಲಕ್ಕೆ ವಿನಾಶಕಾರಿಯಾಗಿರುವುದರ ಬಗ್ಗೆ ವಿಷಾದ ವ್ಯಕ್ತಪಡಿಸಿದರು. ಮಾನವ ಜೀವನವನ್ನೂ ಸುಖಮಯ ಮಾಡಬೇಕಾದ ವಿಜ್ಞಾನ ಇಂದು ವಿನಾಶ ಕಾರ್ಯದಲ್ಲಿ ಸಾಗಿದ್ದು ಜಗತನ್ನು ಧ್ವಂಸ ಗೊಳಿಸುವತ್ತ ಸಾಗಿದೆ. ಇತ್ತೀಚಿಗೆ ನಡೆದ ಕೊಲ್ಲಿಯುದ್ಧದಲ್ಲಿ ಇವು ಸಾಬೀತಾಗಿದೆ ಎಂದು ವಿವರಿಸಿದರು. ವಿಜ್ಞಾನ ಮತ್ತು ತಂತ್ರಜ್ಞಾನ ಆಧ್ಯಾತ್ಮಿಕತೆಯನ್ನು ಒಳಗೊಂಡು ಸಮಗ್ರವಾದರೆ ಮಾತ್ರ ವಿನಾಶದ ಹಾದಿಯನ್ನು ಬದಲಿಸಲು ಸಾಧ್ಯ ಎಂದು ಅಭಿಪ್ರಾಯ ಪಟ್ಟರು.



ಶ್ರೀ ಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆ ಅಂಗವಾಗಿ ಫೆಬ್ರವರಿಯಲ್ಲಿ ಏರ್ಪಡಿಸಿದ್ದ 27 ನೇ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಉದ್ಘಾಟನಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವಚನ ನೀಡುತ್ತಿರುವುದು. ಚಿತ್ರದಲ್ಲಿ ತೋಟಗಾರಿಕೆ ಸಚಿವ ಶ್ರೀ ಜಿ. ಪುಟ್ಟಸ್ವಾಮಿ ಗೌಡರು, ಸಂಸತ್ ಸದಸ್ಯರಾದ ಶ್ರೀ ಜಿ. ಎಸ್. ಬಸವರಾಜು, ಶಾಸಕ ಶ್ರೀ ಷಫಿ ಅಹಮದ್ ಕಾಣಬಹುದು.



ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ವಿಧಾನ ಪರಿಷತ್ ಸದಸ್ಯ ಶ್ರೀ ಟಿ. ಹೆಚ್. ನಾರಾಯಣ ಸ್ವಾಮಿ ಯವರು ಬಹುಮಾನ ವಿತರಣೆ ಮಾಡುತ್ತಿರುವುದು. ಚಿತ್ರದಲ್ಲಿ ಪೂಜ್ಯ ಶ್ರೀ ಶ್ರೀ ಗಳವರು ಮತ್ತು ಮಾಜಿ ಸಚಿವರಾದ ಶ್ರೀ ಲಕ್ಷ್ಮಿನರಸಿಂಹಯ್ಯನವರನ್ನು ಕಾಣಬಹುದು.